ಮನೋಹರವಾದ ಮೂಲರಾಮಾಯಣವೆಂಬ ಸೂಕ್ತಿರತ್ನಾಕರದಲ್ಲಿ ವಿಹರಿಸುವ ನನ್ನ ಗುರುಗಳಾದ ತ್ರಿವಿಕ್ರಮರು ನನ್ನೀ ಕೃತಿಯಿಂದ ಸುಪ್ರೀತರಾಗಲಿ. ಕರುಗಳು ಹಸುವಿನ ಹಾಲಿನಿಂದ ಉಪಜೀವಿಸುವಂತೆ ಕವಿಗಳು ಆದಿಕಾವ್ಯವಾದ ಶ್ರೀಮದ್ರಾಮಾಯಣವನ್ನು ಆಶ್ರಯಿಸುತ್ತಾರೆ. ಶ್ರೀಹರಿಪಾದಗಳನ್ನೇ ಆಶ್ರಯಿಸಿ ಪರಮಪವಿತ್ರವೆನಿಸಿದ, ಆದಿಕವಿ ವಾಲ್ಮೀಕಿಯ ರಾಮಾಯಣರೂಪದ ವಾಕ್ಪ್ರವಾಹವು ನಮ್ಮನ್ನು ಪಾವನಗೊಳಿಸಲಿ.

**ನಾರಾಯಣನ ಪಂಚರೂಪಗಳು**

ಜ್ಞಾನಾನಂದಪರಿಪೂರ್ಣನೂ, ಆತ್ಮಾರಾಮನೂ ಆದ ಶ್ರೀನಾರಾಯಣನು ಪ್ರಳಯಕಾಲದಲ್ಲಿ ಮನೋಹರಳಾದ ಲಕ್ಷ್ಮಿಯೊಡನೆ ಕ್ರೀಡಿಸುತ್ತಲಿದ್ದನು. ವಿಶ್ವವನ್ನೇ ನುಂಗಿ ನಿದ್ರಿಸುತ್ತಿರುವವನಂತೆ ಮಲಗಿದ್ದ ಶ್ರೀಹರಿಯನ್ನು ಶ್ರುತ್ಯಭಿಮಾನಿದೇವತೆಯಾದ ಶ್ರೀಲಕ್ಷ್ಮಿಯು ವಂದಿಮಾಗಧರಂತೆ ಸ್ತುತಿಸಿದಳು. ಆಗ ಜಗದುತ್ಪಾದನೆಗಾಗಿ ಶ್ರೀಹರಿಯು ಸಂಕಲ್ಪಿಸಿದನು. ಹೀಗೆ ಸಂಕಲ್ಪಿಸಿದ ನಾರಾಯಣನು ಮೊದಲಿಗೆ ವಾಸುದೇವರೂಪವನ್ನು ತಾಳಿದನು. ಲಕ್ಷ್ಮಿಯು ಮಾಯಾ ಎಂಬ ಹೆಸರುಳ್ಳ ತನ್ನದೊಂದು ರೂಪದಿಂದ ಆತನ ಸೇವೆಗೆ ಸಿದ್ಧಳಾದಳು. ಸಾಧನಪೂರ್ತಿಯನ್ನು ಹೊಂದಿದ್ದ ಜೀವರನ್ನು ಉದರದಿಂದ ಹೊರಗೆ ಹಾಕಿ ಶ್ವೇತದ್ವೀಪಾದಿ ಮುಕ್ತಿಸ್ಥಾನಗಳಿಗೆ ಕಳುಹಿಸಿದನು. ನಂತರ ನಾರಾಯಣನು ಸಂಕರ್ಷಣರೂಪವನ್ನು ತಾಳಿದನು. ಸಂಹಾರಕಾರ್ಯವನ್ನೆಸಗುವ ಈ ರೂಪದ ಪ್ರಖರತೇಜಸ್ಸಿಗೆ ಇಡೀ ಜಗತ್ತೇ ಆಜ್ಯಬಿಂದುವೆನಿಸುತ್ತದೆ. ಲಕ್ಷ್ಮಿಯು ಜಯಾರೂಪದಿಂದ ಈತನನ್ನು ಸೇವಿಸಿದಳು. ಜಗತ್ಸೃಷ್ಟಿಗಾಗಿ ಈ ನಾರಾಯಣನೇ ಪ್ರದ್ಯುಮ್ನನಾದನು. ನಿರ್ವಿಕಾರನೂ, ಅಪ್ರಾಕೃತಸ್ವರೂಪನೂ ಆದ ಈತನು ಪ್ರಾಕೃತಸೃಷ್ಟಿಗೆ ಕಾರಣನೆನಿಸುವುದು ಇವನ ವಿಚಿತ್ರಲೀಲೆಯು. ಈತನೊಡನೆ ಲಕ್ಷ್ಮಿಯು ಕೃತಿರೂಪ

ದಿಂದ ವಿಹರಿಸಿದಳು. ಜಗತ್ಪಾಲನೆಗಾಗಿ ಇವನೇ ಪುನಃ ಅನಿರುದ್ಧನಾದನು. ಲಕ್ಷ್ಮಿಯು ಶಾಂತಿರೂಪದಿಂದ ಇವನ ಅನುಚರೆಯಾದಳು.

ಈತನೇ ಪಂಚರೂಪಿಯೂ, ದ್ವಾದಶರೂಪಿಯೂ, ಶತರೂಪಿಯೂ, ಸಹಸ್ರರೂಪಿಯೂ, ಅನಂತರೂಪಿಯೂ ಆಗಿದ್ದಾನೆ. ಈ ಎಲ್ಲ ರೂಪಗಳೂ ನಿತ್ಯನಿರ್ವಿಕಾರವಾದವುಗಳು. ಈ ರೂಪಗಳಲ್ಲಿ ಪರಸ್ಪರ ಭೇದವಿಲ್ಲ. ಜ್ಞಾನ, ಆನಂದ, ಸ್ವಾತಂತ್ರ್ಯಾದಿ ಸಮಸ್ತ ಅಪ್ರಾಕೃತ ಸದ್ಗುಣಗಳೇ ಈ ಎಲ್ಲ ರೂಪಗಳ ಸ್ವರೂಪವು. ಕ್ಲೇಶ, ನಾಶ, ಪರಾಧೀನತೆ, ಜನನ ಮರಣಾದಿಗಳಾವುವೂ ಈತನನ್ನು ಸ್ಪರ್ಶಿಸವು. ಹೀಗೆಂಬಲ್ಲಿ ವೇದ ವೇದಾಂತ ಸಹಿತವಾದ ಪುರಾಣ, ಇತಿಹಾಸ, ಪಂಚರಾತ್ರ, ಬ್ರಹ್ಮತರ್ಕಾದಿ ಗ್ರಂಥಗಳೇ ಸಾಕ್ಷಿಗಳಾಗಿವೆ

**ಜಗದುತ್ಪತ್ತಿ** ಶ್ರೀಹರಿಯು ಪ್ರಕೃತಿಯಲ್ಲಿರುವ ಸತ್ವರಜಸ್ತಮೋಗುಣಗಳನ್ನು ವಿಷಮಗೊಳಿಸಿ ಮೊದಲಿಗೆ ಮಹತ್ತತ್ವವನ್ನು ಸೃಷ್ಟಿಸಿದನು. ಅದರಿಂದ ಅಹಂಕಾರತತ್ವವು ಸೃಷ್ಟವಾಯಿತು. ಇದು ತಾಮಸ, ತೈಜಸ, ವೈಕಾರಿಕವೆಂದು ಮೂರು ವಿಧವಾಮದು. ತಾಮಸಾಹಂಕಾರದಿಂದ ಪಂಚಭೂತಗಳನ್ನೂ, ತೈಜಸದಿಂದ ಇಂದ್ರಿಯಗಳನ್ನೂ, ವೈಕಾರಿಕದಿಂದ ಇಂದ್ರಿಯಾಭಿಮಾನಿದೇವತೆಗಳ ಶರೀರವನ್ನೂ ಸೃಷ್ಟಿಸಿದನು. ಈ ಎಲ್ಲ ತತ್ವಗಳೂ ಮತ್ತು ದೇವತೆಗಳೂ ಪ್ರಯತ್ನಿಸಿದರೂ ಬ್ರಹ್ಮಾಂಡದ ಸೃಷ್ಟಿಯಲ್ಲಿ ಶಕ್ತರಾಗಲಿಲ್ಲ. ಅವರೆಲ್ಲರೂ ಹರಿಯನ್ನೇ ಮರೆಹೊಕ್ಕರು. ಆಗ ಶ್ರೀಹರಿಯು ಈ ಎಲ್ಲರಲ್ಲಿಯೂ ತಾನೇ ಪ್ರವಿಷ್ಟನಾಗಿ ವಿಸ್ತಾರವಾದ ಜಗತ್ತನ್ನು ಸೃಷ್ಟಿಸಿದನು. ಹೀಗೆ ಸೃಷ್ಟಿಮಾಡಲು ಪೂರ್ಣಕಾಮನಾದ ಈತನ ಅಪಾರ ಕಾರುಣ್ಯವೇ ಕಾರಣ.

ಈ ಜಗನ್ನಾಥನ ನಾಭಿಕಮಲದಲ್ಲಿ ಬ್ರಹ್ಮದೇವನು ಹುಟ್ಟಿದನು. ಆತನು ದೇವಾಸುರನರರನ್ನು ಸೃಷ್ಟಿಸಿದನು. ಸನಕಾದಿಮುನಿಗಳೂ ಈ

ಬ್ರಹ್ಮನ ಮಾನಸಪುತ್ರರು. ಇವರು ಪ್ರಜೋತ್ಪಾದನೆಯಲ್ಲಿ ಪ್ರವೃತ್ತ ರಾಗದಿರಲು ಬ್ರಹ್ಮದೇವನು ಕುಪಿತನಾದನು. ಆಗ ಆತನ ಲಲಾಟದಿಂದ ರುದ್ರನು ಜನಿಸಿದನು. ಈತನೇ ಅಹಂಕಾರತತ್ತ್ವದ ಅಭಿಮಾನಿಯು. ಜೀವೋತ್ತಮನಾದ ಬ್ರಹ್ಮದೇವನ ಇಂದ್ರಿಯಗಳಿಂದ ಮರೀಚಿಯೇ ಮೊದಲಾದ ಋಷಿಗಳು ಜನಿಸಿದರು. ಈ ಮರೀಚಿಯ ಮಗನೇ ಕಶ್ಯಪನು, ಕಶ್ಯಪನಿಗೆ ದಿತಿ, ಅದಿತಿ, ದನು, ಕದ್ರು, ವಿನತಾ, ಕೀಕಸಾ ಎಂದು ಆರು ಜನ ಪತ್ನಿಯರು. ದಿತಿಯಲ್ಲಿ ದೈತ್ಯರೂ, ಅದಿತಿಯಲ್ಲಿ ದೇವತೆಗಳೂ, ದನುವಿನಲ್ಲಿ ದಾನವರೂ, ಕದ್ರುವಿನಲ್ಲಿ ನಾಗರೂ, ವಿನತೆಯಲ್ಲಿ ಪಕ್ಷಿಗಳೂ, ಕೀಕಸೆಯಲ್ಲಿ ಯಾತುಧಾನರೂ ಜನಿಸಿದರು. ಹೀಗೆ ಕಶ್ಯಪನು ಈ ಜಗದ್ವೃಕ್ಷದ ಬೀಜನೆನಿಸಿದನು.

**ಸೂರ್ಯವಂಶದ ಪರಂಪರೆ**

ವಿವಸ್ವಾನನು ಕಶ್ಯಪರಿಂದ ಅದಿತಿಯಲ್ಲಿ ಜನಿಸಿದ ಮಕ್ಕಳಲ್ಲೊಬ್ಬನು. ಇವನ ಮಗನೇ ಶ್ರಾದ್ಧದೇವನೆಂಬ ಪ್ರಸಿದ್ಧ ಮನುವು ಇವನ ವಂಶದಲ್ಲಿಯೇ ಇಕ್ಷ್ವಾಕು ಮೊದಲಾದ ಚಕ್ರವರ್ತಿಗಳು ಶೋಭಿಸಿದರು.

**ದಶರಥ ಸಾರ್ವಭೌಮ**

ಈ ವಿಮಲ ರಾಜವಂಶದಲ್ಲಿಯೇ ದಶರಥನು ಜನಿಸಿದನು. ಈತನ ರಾಜಧಾನಿ ಅಯೋಧ್ಯೆ. ಸಪ್ತ ದ್ವೀಪಗಳಿಂದ ಕೂಡಿದ ಭೂಮಂಡಲವೇ ಇವನ ರಾಜ್ಯ. ಇವನ ರಾಜ್ಯವು ಧರ್ಮದ ನೆಲೆಬೀಡಾಗಿತ್ತು. ಈ ದೊರೆಯ ಕೊಡುಗೈಯಿಂದ ದಾನ ಪಡೆಯದವನಿಲ್ಲ. ಈತನ ನಿಡುತೋಳ್ಗಳಿಗೆ ಬಲಿಯಾಗದ ಶತ್ರುವಿಲ್ಲ. ಇವನಿಗೆ ಮಕ್ಕಳಿಲ್ಲದಿರುವುದೊಂದೇ ಕೊರತೆ. ತನ್ನ ಮೂರು ಜನ ಮಹಿಷಿಯರಲ್ಲಿಯೂ ಮಕ್ಕಳನ್ನು ಪಡೆಯದೇ ಚಿಂತೆಗೊಳಗಾದನು. ಸಂಸಾರತರುವಿಗೆ ಸಂತಾನವು ಫಲವಲ್ಲವೆ ? ಚಕ್ರವರ್ತಿಯು ಮಂತ್ರಕುಶಲನಾದ ಸುಮಂತ್ರನೊಡನೆ ಆಲೋಚಿಸಿ ಪುತ್ರಪ್ರಾಪ್ತಿಗಾಗಿ ಅಶ್ವಮೇಧಯಜ್ಞದಿಂದ ಶ್ರೀಹರಿಯನ್ನು ಪೂಜಿ

ಸಲು ನಿಶ್ಚಯಿಸಿದನು ಶ್ರೀನಿಕೇತನನು ಸುಪ್ರಸನ್ನನಾದರೆ ದುರ್ಲಭವಾವುದು ? ಸುಮಂತ್ರನಿಗೆ ಹೇಳಿ ಮಂತ್ರತಂತ್ರಗಳಲ್ಲಿ ಕುಶಲರಾದ ಋತ್ವಿಗ್ಜನರನ್ನೂ, ಗುರುಗಳಾದ ವಸಿಷ್ಠರನ್ನೂ ಬರಮಾಡಿಕೊಂಡನು. ಆಹ್ವಾನಿತರಾಗಿ ಬಂದ ಬ್ರಹ್ಮಜ್ಞಾನಿಗಳನ್ನು ಜಗದಭಿರಾಮನಾದ ಶ್ರೀಹರಿಯನ್ನು ಸ್ಮರಿಸುತ್ತಾ ದಶರಥನು ನಮಿಸಿದನು.

---

## ಪ್ರಕರಣ ೨

### ದೇವತೆಗಳಿಗೆ ಕ್ಷೀರಸಾಗರಶಾಯಿಯ ದರ್ಶನ

**ಯಜ್ಞಪ್ರಯತ್ನ ಮತ್ತು ಋಷ್ಯಶೃಂಗರ ಆಗಮನ**

ಈ ಯಜ್ಞಕ್ಕೆ ಬಂದ ಸುಯಜ್ಞ, ವಾಮದೇವ, ಜಾಬಾಲಿ, ಕಶ್ಯಪ, ವಸಿಷ್ಠರೆಂಬ ಋಷಿಗಳು ಪಂಚಾಗ್ನಿಗಳಂತೆ ಶೋಭಿಸಿದರು. ಸಪರಿವಾರವಾಗಿ ಬಂದ ಆ ಜ್ಞಾನಿಗಳ ಅಪ್ಪಣೆಯಂತೆ ರಾಜನು ಯಜ್ಞಸಾಮಗ್ರಿಗಳನ್ನು ಸಿದ್ಧಗೊಳಿಸಿದನು. ಪುತ್ರಲಾಲಸೆಯಿಂದ ಕೂಡಿದ ರಾಜನನ್ನು ಕುರಿತು ಏಕಾಂತದಲ್ಲಿ ಸುಮಂತ್ರನು ಹೀಗೆ ನುಡಿದನು "ಎಲೈ ರಾಜೇಂದ್ರ, ತ್ರಿಕಾಲಜ್ಞಾನಿಯಾದ ಸನತ್ಕುಮಾರನು ಮುನಿಗಳ ಸಭೆಯಲ್ಲಿ ಹಿಂದೆ ನಿರೂಪಿಸಿದ ವೃತ್ತಾಂತವನ್ನು ಲಾಲಿಸು. 'ಕಶ್ಯಪರಿಗೆ ಮಹಾತಪಸ್ವಿಯಾದ ವಿಭಾಂಡಕನೆಂಬ ಮಗನಿದ್ದಾನೆ. ಈತನಿಗೆ ಋಷ್ಯಶೃಂಗನೆಂಬ ಅತಿತೇಜಸ್ವಿಯಾದ ಪುತ್ರನುದಯಿಸುವನು. ಬ್ರಹ್ಮಚರ್ಯದಿಂದ ವರ್ಚಸ್ವಿಯಾದ ಇವನನ್ನು ಲೋಮಪಾದನೆಂಬ ರಾಜನು ತನ್ನ ರಾಜ್ಯಕ್ಕೆ ಬರಮಾಡುವನು. ಮುನಿವೇಷದ ಸ್ತ್ರೀಯರಿಂದ ವಂಚಿತನಾಗಿ ಇವನು ಲೋಮಪಾದನ ರಾಜ್ಯಕ್ಕೆ ಬರುವನು. ಅನಾವೃಷ್ಟಿಯಿಂದ ಪೀಡಿತವಾದ ಆ ದೇಶವು ಇವನ ಆಗಮನದಿಂದ ವೃಷ್ಟ್ಯಾದಿಗಳಿಂದ ಪೂರ್ಣವಾಗುತ್ತದೆ. ಇದರಿಂದ ಸಂತುಷ್ಟನಾದ ರಾಜನು ತನ್ನ ಮಗಳಾದ ಶಾಂತಳನ್ನು ಈ

ಬ್ರಹ್ಮನ ಮಾನಸಪುತ್ರರು. ಇವರು ಪ್ರಜೋತ್ಪಾದನೆಯಲ್ಲಿ ಪ್ರವೃತ್ತ ರಾಗದಿರಲು ಬ್ರಹ್ಮದೇವನು ಕುಪಿತನಾದನು. ಆಗ ಆತನ ಲಲಾಟದಿಂದ ರುದ್ರನು ಜನಿಸಿದನು. ಈತನೇ ಅಹಂಕಾರತತ್ವದ ಅಭಿಮಾನಿಯು. ಜೀವೋತ್ತಮನಾದ ಬ್ರಹ್ಮದೇವನ ಇಂದ್ರಿಯಗಳಿಂದ ಮರೀಚಿಯೇ ಮೊದಲಾದ ಋಷಿಗಳು ಜನಿಸಿದರು. ಈ ಮರೀಚಿಯ ಮಗನೇ ಕಶ್ಯಪನು, ಕಶ್ಯಪನಿಗೆ ದಿತಿ, ಅದಿತಿ, ದನು, ಕದ್ರು, ವಿನತಾ, ಕೀಕಸಾ ಎಂದು ಆರು ಜನ ಪತ್ನಿಯರು. ದಿತಿಯಲ್ಲಿ ದೈತ್ಯರೂ, ಅದಿತಿಯಲ್ಲಿ ದೇವತೆಗಳೂ, ದನುವಿನಲ್ಲಿ ದಾನವರೂ, ಕದ್ರುವಿನಲ್ಲಿ ನಾಗರೂ, ವಿನತೆಯಲ್ಲಿ ಪಕ್ಷಿಗಳೂ, ಕೀಕಸೆಯಲ್ಲಿ ಯಾತುಧಾನರೂ ಜನಿಸಿದರು. ಹೀಗೆ ಕಶ್ಯಪನು ಈ ಜಗದ್ವೃಕ್ಷದ ಬೀಜನೆನಿಸಿದನು.

**ಸೂರ್ಯವಂಶದ ಪರಂಪರೆ**

ವಿವಸ್ವಾನನು ಕಶ್ಯಪರಿಂದ ಅದಿತಿಯಲ್ಲಿ ಜನಿಸಿದ ಮಕ್ಕಳಲ್ಲೊಬ್ಬನು. ಇವನ ಮಗನೇ ಶ್ರಾದ್ಧದೇವನೆಂಬ ಪ್ರಸಿದ್ಧ ಮನುವು ಇವನ ವಂಶದಲ್ಲಿಯೇ ಇಕ್ಷ್ವಾಕು ಮೊದಲಾದ ಚಕ್ರವರ್ತಿಗಳು ಶೋಭಿಸಿದರು

**ದಶರಥ ಸಾರ್ವಭೌಮ**

ಈ ವಿಮಲ ರಾಜವಂಶದಲ್ಲಿಯೇ ದಶರಥನು ಜನಿಸಿದನು. ಈತನ ರಾಜಧಾನಿ ಅಯೋಧ್ಯೆ. ಸಪ್ತ ದ್ವೀಪಗಳಿಂದ ಕೂಡಿದ ಭೂಮಂಡಲವೇ ಇವನ ರಾಜ್ಯ. ಇವನ ರಾಜ್ಯವು ಧರ್ಮದ ನೆಲೆಬೀಡಾಗಿತ್ತು. ಈ ದೊರೆಯ ಕೊಡುಗೈಯಿಂದ ದಾನ ಪಡೆಯದವನಿಲ್ಲ. ಈತನ ನಿಡುತೋಳ್ಗಳಿಗೆ ಬಲಿಯಾಗದ ಶತ್ರುವಿಲ್ಲ. ಇವನಿಗೆ ಮಕ್ಕಳಿಲ್ಲದಿರುವುದೊಂದೇ ಕೊರತೆ. ತನ್ನ ಮೂರುಜನ ಮಹಿಷಿಯರಲ್ಲಿಯೂ ಮಕ್ಕಳನ್ನು ಪಡೆಯದೇ ಚಿಂತೆಗೊಳಗಾದನು. ಸಂಸಾರತರುವಿಗೆ ಸಂತಾನವು ಫಲವಲ್ಲವೆ ? ಚಕ್ರವರ್ತಿಯು ಮಂತ್ರಕುಶಲನಾದ ಸುಮಂತ್ರನೊಡನೆ ಆಲೋಚಿಸಿ ಪುತ್ರಪ್ರಾಪ್ತಿಗಾಗಿ ಅಶ್ವಮೇಧಯಜ್ಞದಿಂದ ಶ್ರೀಹರಿಯನ್ನು ಪೂಜಿ

ಸಲು ನಿಶ್ಚಯಿಸಿದನು ಶ್ರೀನಿಕೇತನನು ಸುಪ್ರಸನ್ನನಾದರೆ ದುರ್ಲಭ ವಾವುದು ? ಸುಮಂತ್ರನಿಗೆ ಹೇಳಿ ಮಂತ್ರತಂತ್ರಗಳಲ್ಲಿ ಕುಶಲರಾದ ಋತ್ವಿಗ್ಜನರನ್ನೂ, ಗುರುಗಳಾದ ವಸಿಷ್ಠರನ್ನೂ ಬರಮಾಡಿಕೊಂಡನು. ಆಹ್ವಾನಿತರಾಗಿ ಬಂದ ಬ್ರಹ್ಮಜ್ಞಾನಿಗಳನ್ನು ಜಗದಭಿರಾಮನಾದ ಶ್ರೀಹರಿಯನ್ನು ಸ್ಮರಿಸುತ್ತಾ ದಶರಥನು ನಮಿಸಿದನು.

---

## ಪ್ರಕರಣ ೨

### ದೇವತೆಗಳಿಗೆ ಕ್ಷೀರಸಾಗರಶಾಯಿಯ ದರ್ಶನ

**ಯಜ್ಞಪ್ರಯತ್ನ ಮತ್ತು ಋಷ್ಯಶೃಂಗರ ಆಗಮನ**

ಈ ಯಜ್ಞಕ್ಕೆ ಬಂದ ಸುಯಜ್ಞ, ವಾಮದೇವ, ಜಾಬಾಲಿ, ಕಶ್ಯಪ, ವಸಿಷ್ಠರೆಂಬ ಋಷಿಗಳು ಪಂಚಾಗ್ನಿಗಳಂತೆ ಶೋಭಿಸಿದರು. ಸಪರಿವಾರವಾಗಿ ಬಂದ ಆ ಜ್ಞಾನಿಗಳ ಅಪ್ಪಣೆಯಂತೆ ರಾಜನು ಯಜ್ಞಸಾಮಗ್ರಿಗಳನ್ನು ಸಿದ್ಧಗೊಳಿಸಿದನು. ಪುತ್ರಲಾಲಸೆಯಿಂದ ಕೂಡಿದ ರಾಜನನ್ನು ಕುರಿತು ಏಕಾಂತದಲ್ಲಿ ಸುಮಂತ್ರನು ಹೀಗೆ ನುಡಿದನು: "ಎಲೈ ರಾಜೇಂದ್ರ, ತ್ರಿಕಾಲಜ್ಞಾನಿಯಾದ ಸನತ್ಕುಮಾರನು ಮುನಿಗಳ ಸಭೆಯಲ್ಲಿ ಹಿಂದೆ ನಿರೂಪಿಸಿದ ವೃತ್ತಾಂತವನ್ನು ಲಾಲಿಸು. 'ಕಶ್ಯಪರಿಗೆ ಮಹಾತಪಸ್ವಿಯಾದ ವಿಭಾಂಡಕನೆಂಬ ಮಗನಿದ್ದಾನೆ. ಈತನಿಗೆ ಋಷ್ಯಶೃಂಗನೆಂಬ ಅತಿತೇಜಸ್ವಿಯಾದ ಪುತ್ರನುದಯಿಸುವನು. ಬ್ರಹ್ಮಚರ್ಯದಿಂದ ವರ್ಚಸ್ವಿಯಾದ ಇವನನ್ನು ಲೋಮಪಾದನೆಂಬ ರಾಜನು ತನ್ನ ರಾಜ್ಯಕ್ಕೆ ಬರಮಾಡುವನು. ಮುನಿವೇಷದ ಸ್ತ್ರೀಯರಿಂದ ವಂಚಿತನಾಗಿ ಇವನು ಲೋಮಪಾದನ ರಾಜ್ಯಕ್ಕೆ ಬರುವನು. ಅನಾವೃಷ್ಟಿಯಿಂದ ಪೀಡಿತವಾದ ಆ ದೇಶವು ಇವನ ಆಗಮನದಿಂದ ವೃಷ್ಟ್ಯಾದಿಗಳಿಂದ ಪೂರ್ಣವಾಗುತ್ತದೆ. ಇದರಿಂದ ಸಂತುಷ್ಟನಾದ ರಾಜನು ತನ್ನ ಮಗಳಾದ ಶಾಂತಳನ್ನು ಈ

ಋಷಿಗೆ ವಿವಾಹಮಾಡಿಕೊಡುತ್ತಾನೆ. ಮುಂದೆ ದಶರಥನೆಂಬ ರಾಜನು ಈ ಮುನಿಯನ್ನು ಕರೆತಂದು ಪುತ್ರಾರ್ಥಿಯಾಗಿ ಯಜ್ಞಮಾಡುತ್ತಾನೆ. ಈ ಯಜ್ಞದಿಂದ ಸಂತುಷ್ಟನಾದ ಶ್ರೀಹರಿಯು ದಶರಥಪುತ್ರನಾಗಿ ರಾಮ ರೂಪದಿಂದ ಅವತರಿಸುತ್ತಾನೆ. ರಮಣೀಯವಾದ ಆ ರಾಮಚಂದ್ರನ ಕೀರ್ತಿಚಂದ್ರಮನು ಜಗತ್ತಿನ ಕತ್ತಲನ್ನು ನಾಶಗೊಳಿಸುವನು. ಆನಂದ ಚಂದ್ರಿಕೆಯು ಜಗತ್ತನ್ನು ವ್ಯಾಪಿಸುವುದು' ದೇವಗುಹ್ಯವಾದ ಈ ಕಥೆ ಯನ್ನು ಸನತ್ಕುಮಾರನು ಹೇಳುತ್ತಿರಲು ನಾನೂ ಕೇಳಿದೆನು. ಆದುದ ರಿಂದ ನೀನು ಲೋಮಪಾದನ ಮನೆಯಿಂದ ಆ ಮುನಿಯನ್ನು ಕರೆತಂದು ನಿನ್ನ ಯಜ್ಞವನ್ನು ನಡೆಯಿಸು" ಎಂದನು. ಈ ಮಾತನ್ನು ಕೇಳಿ ದಶರಥನು ವಸಿಷ್ಠರ ಅಪ್ಪಣೆಯನ್ನು ಪಡೆದು ತಾನೇ ಹೋಗಿ ಆ ಮುನೀಂದ್ರನನ್ನು ಕರೆತಂದನು. ಯಜ್ಞಹಯವು ಭೂಪ್ರದಕ್ಷಿಣೆ ಮಾಡಿ ಬಂದಿತು. ಸರಯೂ ನದಿಯ ಉತ್ತರತೀರದಲ್ಲಿ ರಾಜನು ಯಜ್ಞದೀಕ್ಷೆ ಯನ್ನು ವಹಿಸಿದನು.

**ಅಶ್ವಮೇಧಯಜ್ಞ** ಆಹ್ವಾನಿತರಾದ ರಾಜರು ಕಪ್ಪಕಾಣಿಕೆಗಳಿಂದ ಸಹಿತರಾಗಿ ಯಜ್ಞಮಂಟಪಕ್ಕೆ ಬಂದರು ಅಲ್ಲಿ ಅತಿಥಿಸತ್ಕಾರವು ಯಥೇಚ್ಛವಾಗಿ ನಡೆಯಿತು. ಈ ಮಹೋತ್ಸವವನ್ನು ನೋಡಲು ಪ್ರಜೆಗಳು ವಿಶೇಷವಾಗಿ ನೆರೆದರು. ಕರ್ಮಕಾಂಡಪರಿಣತರೂ, ಗುಣಸಂಪನ್ನರೂ ಆದ ಋತ್ವಿಗ್ಜನರಿಂದ ಕೂಡಿ ಋಷ್ಯಶೃಂಗ ಮತ್ತು ವಸಿಷ್ಠರು ಈ ಯಜ್ಞವನ್ನು ಮಾಡಿಸಿದರು; ಮಂತ್ರ, ತಂತ್ರ, ಕರಣ, ಕರ್ತೃ, ವಹ್ನಿ, ದೇಶ, ಕಾಲ, ಇವೆಲ್ಲವರ ಲ್ಲಿಯೂ ಕೇಶವನನ್ನು ಚಿಂತಿಸಿದರು. ಯಜ್ಞಾಂಗಗಳಾದ ಇಷ್ಟಿ ಮತ್ತು ಪ್ರವರ್ಗ್ಯಗಳಲ್ಲಿ ಸೋಮರಸದಿಂದಲೂ, ಪಶುಗಳಿಂದಲೂ ಮುಖ್ಯ ಪ್ರಾಣನೇ ಮೊದಲಾಗುಳ್ಳ ದೇವಸಮೂಹವನ್ನು ಸಂತುಷ್ಟಿಗೊಳಿಸಿದರು; ದಶರಥನೇ ಯಜಮಾನ; ಬ್ರಹ್ಮಪುತ್ರನೇ ಯಾಜಕ; ರಾಮೋದಯವೇ ಫಲವಾದ ಈ ಯಜ್ಞವು ವರ್ಣಿಸಲಸದಳವು. ದಿಕ್ಪಾಲಕರಿಗೆ ಹವಿಸ್ಸು

ಅರ್ಪಿಸಲ್ಪಟ್ಟಿತು. ರಾಜನು ಲಕ್ಷಾಂತರ ಗೋವುಗಳನ್ನೂ, ಅರ್ಬುದ ಸಂಖ್ಯೆಯ ಸುವರ್ಣವನ್ನೂ ಋತ್ವಿಗ್ಜನರಿಗೆ ದಾನಮಾಡಿದನು. ಸುವರ್ಣದ ನಾಲ್ಕರಷ್ಟು ರಜತವನ್ನು ದಾನಗೈದನು. ಎಲ್ಲವೂ ಹರಿಗರ್ಪಿತವೆಂದು ನಮಸ್ಕರಿಸಿದನು. ದಾನದಿಂದ ಸಂತುಷ್ಟರಾದ ಬ್ರಾಹ್ಮಣರು ರಾಜನನ್ನು ಆಶೀರ್ವದಿಸಿದರು. ಅಶ್ವಮೇಧಾಗ್ನಿಯು ರಾಜನ ಪಾಪವನ್ನೆಲ್ಲಾ ದಹಿಸಿತು.

ಈ ಕ್ಷತ್ರಿಯೇಂದ್ರನಿಗೆ ಪುತ್ರಪ್ರದವಾದ ಇಷ್ಟಿಯನ್ನು ಋಷ್ಯಶೃಂಗನು ಮಾಡಿದನು. ಯೋಗಿಯಾದ ಈ ಮುನಿಯು ಹವಿರ್ಭಾಗಾರ್ಥವಾಗಿ ಬಂದ ಇಂದ್ರಸಹಿತರಾದ ದೇವತೆಗಳಿಗೆ ಕೈಮುಗಿದು ಈರೀತಿ ಪ್ರಾರ್ಥಿಸಿದನು "ದಶರಥನು ಪುತ್ರಾರ್ಥಿಯಾಗಿ ನಿಮ್ಮನ್ನು ಮೊರೆಹೊಕ್ಕಿದ್ದಾನೆ. ಇವನ ಮೇಲೆ ಸುಪ್ರೀತರಾಗಿರಿ. ಇವನು ತ್ರಿಲೋಕವಿಖ್ಯಾತರಾದ ಅನುಪಮರಾದ ಮಕ್ಕಳನ್ನು ಬಯಸುತ್ತಾನೆ. ದೇವಕಾರ್ಯವನ್ನೂ ಅನುಲಕ್ಷಿಸಿ ಇವನ ಮೇಲೆ ಅನುಗ್ರಹಿಸಿರಿ." ದೇವತೆಗಳು ದಶರಥನಿಗೆ ಬೇಡಿದ ವರವನ್ನಿತ್ತು ಬ್ರಹ್ಮಲೋಕಕ್ಕೆ ತೆರಳಿದರು.

**ದೇವತೆಗಳು ಶೇಷಶಾಯಿಯನ್ನು ಮರೆಹೊಗುವುದು**

ಸೃಷ್ಟಿಕರ್ತನಾದ ಚತುರ್ಮುಖಬ್ರಹ್ಮನನ್ನು ನಮಸ್ಕರಿಸಿ ಕೈಮುಗಿದು, "ಹೇ ನಾಥಾ, ರಾಕ್ಷಸರಿಂದ ಪೀಡಿತರಾದ ಪ್ರಜೆಗಳನ್ನು ರಕ್ಷಿಸು. ವಿಶ್ರಾವಸುವಿಗೆ ರಾವಣ ಕುಂಭಕರ್ಣರೆಂಬ ಇಬ್ಬರು ಪ್ರತಾಪಶಾಲಿಗಳಾದ ಮಕ್ಕಳು. ಕುಂಭಕರ್ಣನೇ ಹಿರಿಯು. ರಾವಣನು ಅವನತಮ್ಮನು. ಅವರಿಬ್ಬರೂ ನಿನ್ನ ವರದಿಂದ ಅವಧ್ಯರಾಗಿ ಲೋಕಕಂಟಕರಾಗಿದ್ದಾರೆ ದಶಕಂಠನಾದ ರಾವಣನು ಮಾನವರನ್ನು ಹುರಿದು ತಿನ್ನುತ್ತಾನೆ. ಸಿಂಹವು ಮೃಗಗಳನ್ನು ಸೀಳುವಂತೆ ಈತನು ಅನೇಕ ದೇವತೆಗಳನ್ನೂ, ಗಂಧರ್ವರನ್ನೂ, ಬ್ರಾಹ್ಮಣರನ್ನೂ, ರಾಜರನ್ನೂ, ಮತ್ತಿತರರನ್ನೂ ಸೀಳಿ ಕೊಲ್ಲುತ್ತಿರುವನು. ಸುಂದರವಾದ ಯಾವ ವಸ್ತುವನ್ನೂ

ಈ ಘೋರನು ಲಂಕೆಗೆ ಎಳೆದೊಯ್ಯದೇ ಬಿಡನು ರತ್ನಾಭರಣಗಳಿಂದ ಅಲಂಕೃತರಾದ ಸ್ತ್ರೀರತ್ನಗಳನ್ನು ಎಲ್ಲರೆದುರಿನಲ್ಲಿಯೇ ಅಪಹರಿಸುತ್ತಾನೆ. ಮಾನಿನಿಯರ ಮಾನಹರಣವೇ ತನಗೆ ಭೂಷಣವೆಂದು ತಿಳಿದಿದ್ದಾನೆ. ವೇದಾಧ್ಯಯನ ಮತ್ತು ಯಜ್ಞಯಾಗಾದಿಗಳಿಗೆ ಕಂಟಕನಾಗಿದ್ದಾನೆ. ಈ ದುರಾಚಾರಿಯು ನಿತ್ಯದಲ್ಲಿಯೂ ದೇವಋಷಿಗಳಿಗೆ ಅನಿಷ್ಟವನ್ನೇ ಆಚರಿಸುತ್ತಲಿದ್ದಾನೆ. ಇಂದ್ರಾದಿದೇವತೆಗಳಾದ ನಮ್ಮನ್ನು ಆನೆಯು ಆಡನ್ನು ಓಡಿಸುವಂತೆ ಓಡಿಸುತ್ತಾನೆ. ಇವನ ಪರಾಕ್ರಮವು ನಮ್ಮನ್ನು ವಿಸ್ಮಯಗೊಳಿಸಿದೆ. ಹೇ ಸ್ವಾಮಿ, ನಿನ್ನ ವರದಿಂದ ಅವಧ್ಯನಾದ ಇವನ ನಾಶೋಪಾಯವನ್ನು ಕೂಡಲೇ ಹೇಳದಿದ್ದಲ್ಲಿ ಜಗತ್ತಿನ ನಾಶವು ನಿಶ್ಚಯ" ಎಂದು ಪ್ರಾರ್ಥಿಸಿದರು. "ಯಾರು ನಮ್ಮ ಯೋಗಕ್ಷೇಮಕರ್ತೃವೋ ಅವನ ಪ್ರೇರಣೆಯಿಂದಲೇ ಈ ವರಪ್ರದಾನವಾಗಿದೆ ಈ ವಿಪತ್ತಿನ ನಿವಾರಣೋಪಾಯವನ್ನು ಅತನೇ ಬಲ್ಲನು" ಎಂದು ಹೇಳಿ ರುದ್ರೇಂದ್ರಾದಿ ದೇವತೆಗಳೊಡನೆ ಆ ಕಂಜಸಂಭವನು ಕ್ಷೀರಸಮುದ್ರತೀರಕ್ಕೆ ಬಂದನು. ಅಮೃತಭೋಜನರಾದ ದೇವತೆಗಳು ನಾರಾಯಣನ ಕೀರ್ತಿವಾರಿಧಿಯು ಪ್ರತಿಬಿಂಬದಂತಿದ್ದ ಕ್ಷೀರಸಮುದ್ರವನ್ನು ಕಂಡರು.

ಈ ರತ್ನಾಕರನು ವೈಕುಂಠದಂತೆ ಕಂಗೊಳಿಸಿದನು. ಹಾಲ್ಗಡಲ ಉತ್ತುಂಗತರಂಗಗಳು ವೈಕುಂಠದ ಪ್ರಾಕಾರದಂತೆ ಒಪ್ಪಿದವು. ಗಂಭೀರ ಸ್ತೋತ್ರನಾದದಿಂದಲೂ, ಕುತೂಹಲಯುಕ್ತ ಹೃದಯದಿಂದಲೂ ನರ್ತನ ಮಾಡುವ ವಿಷ್ಣುಭಕ್ತನಂತೆ ವಿರಾಜಿಸಿತು ಆ ಪಯೋನಿಧಿ. ಬ್ರಹ್ಮಾದಿಗಳು ಪ್ರಸನ್ನಮನಸ್ಕರಾಗಿ ಗೋವಿಂದನನ್ನು ಪ್ರಾರ್ಥಿಸಿದರು. "ಹೇ ಶೇಷ ಶಾಯಿ, ಆದ್ಯಂತಮಧ್ಯರಹಿತ, ನಾನಾವಿಲಾಸಿನ್, ಹೇ ನಾರಾಯಣ ನಿನಗೆ ನಮಸ್ಕಾರವು. ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯ, ನಿಯತಿ, ಜ್ಞಾನ, ಅಜ್ಞಾನ, ಬಂಧ ಮೋಕ್ಷಗಳ ಪ್ರಧಾನಕಾರಣನು ನೀನಾಗಿರುತ್ತಿ. ನಿನ್ನ ಅನಂತಕಲ್ಯಾಣಗುಣಗಳನ್ನು ಸದಾ ಗಾನಮಾಡುತ್ತಲಿರುವ ನಾವೇ ಸಾಕಲ್ಯೇನ ತಿಳಿಯಲಾರೆವು. ಉಳಿದವರ ಪಾಡೇನು ? ಹೇ ಸ್ವಾಮಿ, ರಾವಣಾಗ್ನಿಯು ಜಗತ್ತನ್ನು ದಹಿಸುತ್ತಲಿದೆ. ನೀನು ದಾಶರಥಿಯಾಗಿ

ಅವತರಿಸಿ ನಿನ್ನ ಪರಾಕ್ರಮವೆಂಬ ಸಮುದ್ರೋದಕದಿಂದ ಈ ವಹ್ನಿಯನ್ನು ಶಮನಗೊಳಿಸು. ಅನನ್ಯಶರಣರಾದ ನಿನ್ನ ಭಕ್ತರ ತಾಪವನ್ನು ಶಾಂತಗೊಳಿಸು." ದೇವತೆಗಳ ಸ್ತೋತ್ರದಿಂದ ಸುಪ್ರೀತನಾಗಿ ಪುರಾಣಪುರುಷನಾದ ಆ ನಾರಾಯಣನು ಬಾಲಸೂರ್ಯಪ್ರಭೆಯಿಂದೊಡಗೂಡಿ ಪೀತಾಂಬರವನ್ನುಟ್ಟು ಕೌಸ್ತುಭವನ್ನು ತೊಟ್ಟು ಮನೋಭಿರಾಮವಾದ ರೂಪದಿಂದ ಪ್ರತ್ಯಕ್ಷವಾದನು.

## ಪ್ರಕರಣ ೩

### ಅಖಿಲೋತ್ತಮನ ಅವತಾರ

**ನಾರಾಯಣನ ಅಭಯ**

ಶ್ರೀಹರಿಯು ಚಂದ್ರಿಕಾಸಮ ಮಂದಹಾಸದಿಂದ ದೇವತೆಗಳಿಗೆ ಆಹ್ಲಾದವನ್ನುಂಟುಮಾಡಿದನು. ಮೇಘಗಂಭೀರವಾಕ್ಯಗಳಿಂದ ಅವರ ಭಯ ಶಮನ ಮಾಡಿದನು. "ಎಲೈ, ನಿರ್ಜರರೇ ಹೆದರಬೇಡಿ. ಸ್ವಸ್ಥಚಿತ್ತರಾಗಿ ನಿಮ್ಮ ನಿಮ್ಮ ಸ್ಥಳಗಳಿಗೆ ಹಿಂದಿರುಗಿರಿ ಮೂರುಲೋಕಗಳನ್ನು ಜಯಿಸಿದ್ದರೂ ನಿಮ್ಮ ಶತ್ರುವನ್ನು ನಾನು ನಾಶಗೊಳಿಸುವೆನು" ಎಂದು ಹೇಳಿದನು. ಈ ಮಾತುಗಳು ದೇವತೆಗಳಿಗೆ ಕರ್ಣಾಮೃತವಾದವು. ಅಭಯಪ್ರದಾನದಿಂದ ಸಂತುಷ್ಟರಾದ ಅಮರರು ಕೃತಕೃತ್ಯರಾಗಿ ಸ್ವರ್ಗಲೋಕಕ್ಕೆ ತೆರಳಿದರು.

**ಪಾಯಸಪ್ರದಾನ**

ಇದೇ ಕಾಲಕ್ಕೆ ಇತ್ತ ರಾಜನ ಯಜ್ಞಕುಂಡದಿಂದ ಸುವರ್ಣಭವ್ಯವಾದ ಪುರುಷಾಕೃತಿಯೊಂದು ಮೇಲಕ್ಕೆದ್ದು ಪರಮಾನ್ನವನ್ನು ತುಂಬಿದ ಪಾತ್ರೆಯೊಂದನ್ನು ರಾಜನ ಕೈಗಿತ್ತು, "ಇದು ಪುತ್ರಪ್ರದವು" ಎಂದು ಹೇಳಿ ತಕ್ಷಣದಲ್ಲಿಯೇ ಅದೃಶ್ಯವಾಯಿತು. ಸಂತುಷ್ಟನಾದ ದಶರಥನು ತನ್ನ ಪ್ರಿಯಮಡದಿಯಾದ ಕೌಸಲ್ಯೆಗೆ ಆ ಪರಮಾನ್ನದಲ್ಲಿ ಅರ್ಧಭಾಗವನ್ನು

ಕೊಟ್ಟನು ಉಳಿದುದರಲ್ಲಿ ಅರ್ಧವನ್ನು ಸುಮಿತ್ರೆಗಿತ್ತನು ಉಳಿದ ಪರಮಾನ್ನವನ್ನು ಮತ್ತೆ ಅರ್ಧ ಮಾಡಿ ಒಂದು ಭಾಗವನ್ನು ಕೈಕೇಯಿಗೂ, ಇನ್ನೊಂದು ಭಾಗವನ್ನು ಪುನಃ ಸುಮಿತ್ರೆಗೂ ಕೊಟ್ಟನು. ಈ ಪಾಯಸಾಂಶಗಳನ್ನು ಭುಂಜಿಸಿ ದೇವಿಯರು ಅತಿಯಾಗಿ ಶೋಭಿಸಿದರು ಆ ವರಾಂಗನೆಯರು ಕಾಲಕ್ರಮದಲ್ಲಿ ದಶರಥನಿಂದ ಗರ್ಭಧಾರಣೆ ಮಾಡಿದರು. ದಶರಥನ ಮನೆಯಲ್ಲಿ ಗದಾಪಾಣಿಯು ಅವತರಿಸುವನೆಂದು ತಿಳಿದು ಬ್ರಹ್ಮದೇವನು ದೇವತೆಗಳನ್ನು ಕುರಿತು, "ಪೂರ್ಣಕಾಮನಾದ ಶ್ರೀಹರಿಯು ಸಜ್ಜನರಲ್ಲಿ ದಯೆದೋರಿ ಅವರ ರಕ್ಷಣೆಗಾಗಿ ಅವತರಿಸಲಿರುವನು. ಅವನನ್ನು ಸೇವಿಸಲು ಕರಡಿ ಕಪಿಗಳೇ ಮೊದಲಾದ ನಾನಾ ಯೋನಿಗಳಲ್ಲಿ ಅವತರಿಸಿರಿ" ಎಂದು ನುಡಿದನು.

**ದೇವತೆಗಳ ಅವತರಣ**

ಆಗ ದೇವತೆಗಳು ಬ್ರಹ್ಮನ ಅಪ್ಪಣೆಯಂತೆ ಕೆಲವರು ಗೋಲಾಂಗೂಲಗಳಾಗಿಯೂ (ಸಿಂಗಳೀಕ), ಕೆಲವರು ಕರಡಿಗಳಾಗಿಯೂ, ಕೆಲವರು ವಾನರರಾಗಿಯೂ, ಮತ್ತೆ ಕೆಲವರು ಮನುಷ್ಯರಾಗಿಯೂ ಜನ್ಮತಾಳಿದರು. ಬ್ರಹ್ಮಮುಖದಿಂದ ಯಮದೇವನು ಆದಿಜಾಂಬವನಾಗಿ ಉದ್ಭವಿಸಿದನು. ಅಖಿಲಜೀವೋತ್ತಮನಾದ ಮುಖ್ಯಪ್ರಾಣನು ಹನುಮಂತನಾಗಿ ಅವತರಿಸಿದನು. ಇಂದ್ರನು ವಾಲಿಯಾದನು ಚಂದ್ರನು ಇವನ ಮಗನಾದ ಅಂಗದನಾದನು ಸೂರ್ಯನು ಸುಗ್ರೀವನಾಗಿಯೂ, ಅಗ್ನಿಯು ನೀಲನೆಂಬ ಕಪಿಯಾಗಿಯೂ ಅವತರಿಸಿದರು ವರುಣವಿಶ್ವಕರ್ಮರು ಸುಷೇಣ ನಳರೆಂಬ ಕಪಿಗಳಾದರು. ಅಶ್ವಿನೀದೇವತೆಗಳು ಮೈಂದವಿವಿದರಾಗಿಯೂ, ಪಂಚಪ್ರಾಣರು ಗಜ, ಗವಾಕ್ಷ, ಗವಯ, ವೃಷ್ಟ, ಗಂಧಮಾದನರಾಗಿಯೂ ಕಪಿರೂಪದಿಂದ ಜನಿಸಿದರು. ಅಷ್ಟವಸುಗಳ ಅಂಶದಿಂದ ಪನಸ ಮತ್ತು ಶತಬಲಿಗಳೆಂಬ ಕಪಿಗಳಾದರು ಮರುದ್ಗಣದಲ್ಲಿ ಶ್ರೇಷ್ಠರಾದಿಬ್ಬರು ಜಟಾಯು ಸಂಪಾತಿಯೆಂಬ ಪಕ್ಷಿರಾಜರಾದರು ಜ್ಞಾನಿಯಾದ ಬೃಹಸ್ಪತಿಯು ತಾರನೆಂಬ ಕಪಿಯಾಗಿ ಜನಿಸಿದನು ಇಂದ್ರಮಹಿಷಿಯಾದ

ಶಚಿಯು ಈ ತಾರನ ತಂಗಿಯಾದಳು. ಕುಬೇರನು ಕತ್ಥನನೆಂಬ ಕಪಿಯಾದನು. ನಿರ್‌ಋತಿಯು ದುರ್ಮುಖನಾದನು. ಮರುದ್ಗಣದಲ್ಲಿ ಶ್ರೇಷ್ಠನಾದವನೇ ಕೇಸರೀ ಎಂಬ ಕಪಿಪುಂಗವನಾಗಿ ಅವತರಿಸಿದನು. ಪರ್ಜನ್ಯನು ಶರಭನಾಗಿ ಜನಿಸಿದನು ಇವರಲ್ಲದೇ ಇನ್ನೂ ಅನೇಕ ಸಹಸ್ರಾರು ಋಷಿ, ಗಂಧರ್ವ, ಸಿದ್ಧರೇ ಮೊದಲಾದವರು ಅವತರಿಸಿದರು. ಪ್ರಾಯಃ ಇವರೆಲ್ಲರೂ ತಮ್ಮ ಮೂಲರೂಪದ ಒಂದಂಶದಿಂದಲೇ ಆಯಾ ಮೂಲರೂಪದ ಪುತ್ರರಾಗಿಯೇ ಜನಿಸಿದರು ಇವರೇನು ಸಾಮಾನ್ಯರಲ್ಲ. ಯುದ್ಧದಲ್ಲಿ ಒಬ್ಬೊಬ್ಬರೂ ಹತ್ತುಸಹಸ್ರ ಆನೆಗಳ ಬಲವುಳ್ಳವರು. ರೆಕ್ಕೆಗಳಿಲ್ಲದ ಪರ್ವತಗಳಂತೆ ಬೃಹದಾಕಾರದವರು. ಕುಪಿತರಾದರೆ ಪರ್ವತಗಳನ್ನೆತ್ತಿ ಎಸೆಯಬಲ್ಲರು; ಭೂಮಿಯನ್ನೇ ಸೀಳುವ ಪರಾಕ್ರಮಿಗಳು; ಉಗುರು, ಹಲ್ಲುಗಳೇ ಇವರ ಆಯುಧಗಳು. ನಾನಾಯೋನಿಗಳಲ್ಲಿ ಅವತರಿಸಿದ ಇವರುಗಳು ನಾನಾಯುದ್ಧವಿಶಾರದರು. ಅಮಿತವಿಕ್ರಮನಾದ ಶ್ರೀಹರಿಯನ್ನು ಸೇವಿಸಲು ಅವತರಿಸಿದವರು. ರಾಜಾಗಮನವನ್ನು ಸೂಚಿಸಲು ಮೊದಲು ಬರುವ ಭೃತ್ಯರಂತೆ ರಾಮಾವತಾರಕ್ಕೆ ಮೊದಲು ಭೂಮಂಡಲವನ್ನು ಅಲಂಕರಿಸಿದರು.

**ರಾಮ, ಲಕ್ಷ್ಮಣ, ಭರತ, ಶತ್ರುಘ್ನರ ಅವತಾರ**

ವೈವಸ್ವತಮನ್ವಂತರದ ತ್ರೇತಾಯುಗ; ಉತ್ತರಾಯಣದ ಚೈತ್ರಶುಕ್ಲ ನವಮಿ; ಪ್ರಾತಃಕಾಲ ಪುನರ್ವಸು ನಕ್ಷತ್ರ; ಕರ್ಕಾಟಕಲಗ್ನದಲ್ಲಿ ಗುರು ಚಂದ್ರರ ಉದಯವಾಗಿದೆ. ಸೂರ್ಯನು ಮೇಷ ರಾಶಿಗೆ ಕಾಲಿಟ್ಟಿದ್ದಾನೆ. ಮಂಗಳ, ಬುಧ, ಗುರು, ಶುಕ್ರ, ಶನಿಗಳೆಂಬ ಗ್ರಹಪಂಚಕವು ಉಚ್ಚಸ್ಥಾನಗಳಲ್ಲಿರುವ ಶುಭ ಮುಹೂರ್ತದಲ್ಲಿ ದಿವ್ಯವ್ರತಗಳಿಂದ ಪರಿಶುದ್ಧಳಾದ ಕೌಸಲ್ಯಾದೇವಿಯಲ್ಲಿ ಪರಮಪುರುಷ ನಾರಾಯಣನು ಅವತರಿಸಿದನು. ಹೀಗೆ ಜಗನ್ನಾಥನುದಯಿಸಲು ಸಜ್ಜನರು ವ್ಯಾಕುಲರಹಿತರಾಗಿ ಸಂತೋಷಿಸಿದರು ದುರ್ಜನರು ಕಳವಳಗೊಂಡರು. ಬ್ರಹ್ಮಾದಿದೇವತೆ

ಗಳು ಪುಷ್ಪವೃಷ್ಟಿಮಾಡಿದರು ದೇವದುಂದುಭಿಗಳು ಮೊಳಗಿದುವು ರಾಜಧಾನಿಯಾದ ಅಯೋಧ್ಯೆಯು ಜಯಘೋಷದಿಂದ ತುಂಬಿತು. ಅನಂತಪರ್ಯಂಕನಾದ ಶೇಷದೇವನು ಪ್ರಭುಸೇವೆಗಾಗಿ ಆಶ್ಲೇಷಾನಕ್ಷತ್ರ ದಲ್ಲಿ ರವಿಯು ಕರ್ಕಾಟಕಲಗ್ನದಲ್ಲಿರಲು ಜನಿಸಿದನು. ಚಕ್ರಾಭಿಮಾನಿ ಯಾದ ಕಾಮದೇವನು ಕೈಕೇಯಿಯಿಂದ ಪುಷ್ಯನಕ್ಷತ್ರದಲ್ಲಿ ಉದ್ಭವಿಸಿ ದನು. ದೇವದ್ವೇಷಿಗಳ ಹೃದಯವಿದಾರಕ ಪಾಂಚಜನ್ಯದ ಅಭಿಮಾನಿ ಕಾಮಪುತ್ರ ಅನಿರುದ್ಧನು ಸುಮಿತ್ರೆಯ ಎರಡನೇ ಮಗನಾಗಿ ಸ್ವಾಮಿಸೇವೆ ಗಾಗಿ ಜನಿಸಿದನು. ಶ್ರೀನಾರಾಯಣನ ಚತುರ್ವ್ಯೂಹದ ಚತುರ್ಮೂರ್ತಿ ಗಳಲ್ಲಿ ಮೊದಲಿಗನಾದ ವಾಸುದೇವನೇ ರಾಮನಾಗಿ ಅವತರಿಸಿದನು. ಲಕ್ಷ್ಮಣನಲ್ಲಿ ಸಂಕರ್ಷಣನೂ, ಭರತನಲ್ಲಿ ಪ್ರದ್ಯುಮ್ನನೂ, ಶತ್ರುಘ್ನನಲ್ಲಿ ಅನಿರುದ್ಧನೂ ಆವಿಷ್ಟರಾದರು.

**ಜಾತಕರ್ಮ, ನಾಮಕರಣ ಅನ್ನಪ್ರಾಶನ ಇತ್ಯಾದಿ**

ಅಪುತ್ರನಾಗಿದ್ದ ರಾಜನು ಹೀಗೆ ಸತ್ಪುತ್ರರನ್ನು ಪಡೆದು ಕಡುಬಡವನು ಚಿಂತಾಮಣಿಯನ್ನು ಪಡೆ ದಂತೆ ಹರ್ಷಿಸಿದನು. ಮಕ್ಕಳಂತೆ ಪಾಲಿತರಾದ ಅವನ ಪ್ರಜೆಗಳೆಲ್ಲಾ ಈ ಪುತ್ರೋತ್ಸವದಿಂದ ಆನಂದಿ ಸಿದರು. ಅಯೋಧ್ಯೆಯ ನರನಾರಿಯರು ಅಭೂತಪೂರ್ವ ವಾದ ಉತ್ಸವದಲ್ಲಿ ಮಗ್ನರಾದರು ಸೇವಕರೆಲ್ಲಾ ನೃತ್ಯಗಾನಗಳಲ್ಲಿ ವ್ಯಾಮರೆದರು. ರಾಜ್ಞೀಕುಮುದಗಳು ಈ ಸುತಾನ ನೇಂದುಗಳಿಂದ ಆನಂದ ಹೊಂದಿದವು. ರಾಜನ ಮನೋರಥಾರ್ಣ ವವು ಮಕ್ಕಳ ಮುಖಚಂದ್ರಗಳಿಂದ ಉಕ್ಕೇರಿತು. ರಾಜನು ಜಾತಕರ್ಮಾದಿ ಸಂಸ್ಕಾರಗಳಿಂದ ಶಿಶುಗಳನ್ನು ಪವಿತ್ರಗೊಳಿಸಿ ದನು. ಮಕ್ಕಳನ್ನು ಆಶೀರ್ವದಿಸಿದ ಬ್ರಾಹ್ಮಣರು ಭೂರಿದಕ್ಷಿಣೆಯಿಂದ ತುಷ್ಟರಾದರು ಅನಂತನಾಮನಾದ ನಾರಾಯಣನಿಗೆ ನೃಪನು ನಾಮ ಕರಣ ಮಾಡಿದನು. ಸರ್ವರಿಗೂ ಅಭಿರಾಮನಾದುದರಿಂದಲೂ, ಮರಕತ ಶ್ಯಾಮನಾದುದರಿಂದಲೂ, ರಮಾಚಕೋರವಿಧುವಾದುದರಿಂದಲೂ, ಆಶ್ರಿತ

ಜನರಿಗೆ ಸಂಪತ್ಪ್ರದನಾದುದರಿಂದಲೂ, ರಾಮಾ (ಸ್ತ್ರೀ) ಹೃದಯಾಪಹಾರಕನಾದುದರಿಂದಲೂ ಇವನಿಗೆ ರಾಮನೆಂಬ ಹೆಸರು ಒಪ್ಪಿತು ಸಾಧು ಲಕ್ಷಣಗಳಿಂದ ಕೂಡಿದುದರಿಂದ ಸುಮಿತ್ರಾತನಯನಿಗೆ ಲಕ್ಷ್ಮಣನೆಂದು ಹೆಸರಾಯಿತು. ಇವನ ತಮ್ಮನೇ ಶತ್ರುನಾಶಕನಾದ ಶತ್ರುಘ್ನನು. ಕೈಕೇಯಿಯ ಮಗನು ಭಕ್ತಿಭರಿತನಾದುದರಿಂದ ಅವನಿಗೆ ಭರತನೆಂಬ ಹೆಸರು ಅನ್ವರ್ಥವಾಯಿತು. ಈ ನಾಲ್ಕುಜನ ಕುಮಾರರು ಕುಮಾರನಂತೆ ಶೋಭಿಸಿದರು. ರಾಜನು ವೇದಪಾರಂಗತರಾದ ಬ್ರಾಹ್ಮಣರಿಂದ ಅನ್ನಪ್ರಾಶನಾದಿ ಸಂಸ್ಕಾರಗಳನ್ನು ಮಾಡಿಸಿದನು. ಉಪನೀತರಾದ ಈ ಬಾಲಕರು ಗುರುಶುಶ್ರೂಷೆಯಲ್ಲಿ ತೊಡಗಿ ಷಡಂಗಸಹಿತವಾಗಿ ವೇದಗಳನ್ನು ಅಧ್ಯಯನ ಮಾಡಿದರು. ಧನುರ್ವೇದದಲ್ಲಿಯೂ ಪಾರಂಗತರಾದರು ಭೂಮಿಗಿಳಿದ ಈ ದೇವತೆಗಳು ಶೌರ್ಯ, ಧೈರ್ಯ, ಔದಾರ್ಯ, ಶಾಂತಿ, ಇಂದ್ರಿಯನಿಗ್ರಹ, ಐಶ್ವರ್ಯಾದಿಗಳಿಂದ ಕೀರ್ತಿಶಾಲಿಗಳಾದರು. ದಶರಥನ ಪಂಚಪ್ರಾಣರಾದರು. ಜಗತ್ತಿಗೆ ಸಾಕ್ಷಾತ್ ದೈವದಂತೆಯೂ, ಮಾತೃಹೃದಯಗಳಿಗೆ ಆನಂದಪ್ರದರಾದ ನಂದನರಂತೆಯೂ ಪ್ರಕಾಶಿಸಿದರು. ಮಲಗಿರಲಿ, ನಿಂದಿರಲಿ, ಕ್ರೀಡೆಯಲ್ಲಿರಲಿ, ಪ್ರಾರ್ಥನೆಯಲ್ಲಿರಲಿ ಅಗ್ರಜನನ್ನು ಲಕ್ಷ್ಮಣನು ಅರೆಘಳಿಗೆಯೂ ಅಗಲುತ್ತಿರಲಿಲ್ಲ. ಹೀಗೆಯೇ ಶತ್ರುಘ್ನನು ಭರತನನ್ನು ಎಡಬಿಡದೇ ಅನುಸರಿಸಿದನು. ಶ್ರೀರಾಮನ ಮಂದಸ್ಮಿತಯುಕ್ತ ಕಟಾಕ್ಷವೀಕ್ಷಣವೂ, ಬ್ರಹ್ಮನ ರಾಣಿ ಫಣಿವೇಣಿ ಬ್ರಹ್ಮಾಣಿಯನ್ನೂ ಆಕರ್ಷಿಸುವ ಅವನ ಸುಮಧುರವಾಣಿಯೂ ಸ್ವಜನ ಹೃದಯವನ್ನು ಆನಂದಗೊಳಿಸಿದವು.

## ಪ್ರಕರಣ ೪

### ವಿಜಯಾಂಕುರ

**ವಿಶ್ವಾಮಿತ್ರರ ಆಗಮನ**

ಪುತ್ರವತ್ಸಲನಾದ ದಶರಥನು ತನ್ನ ಕುಮಾರರ ಮದುವೆಗಾಗಿ ಯೋಚಿಸುತ್ತಿದ್ದನು. ರಾಜನ ಮನೋರಥವನ್ನೀಡೇರಿಸಲೋ ಎಂಬಂತೆ ಆ ಕಾಲಕ್ಕೆ ಸರಿಯಾಗಿ

ವಿಶ್ವಾಮಿತ್ರಋಷಿಯು ಆಗಮಿಸಿದನು. ಪ್ರತ್ಯುತ್ಥಾನ. ಆಸನಾದಿ
ಗಳಿಂದ ಋಷಿಯನ್ನು ಸತ್ಕರಿಸಿ, ನಮಸ್ಕರಿಸಿ ರಾಜನು ವಿನಯದಿಂದ
ಈ ರೀತಿ ನುಡಿದನು. "ಭಗವದ್ಭಕ್ತರಾದ ತಮಗೆ ನನ್ನಿಂದಾಗಬೇಕಾದ
ಪ್ರಯೋಜನವಿಲ್ಲದಿದ್ದರೂ ನನ್ನ ಶ್ರೇಯಸ್ಸಿಗಾಗಿ ತಮ್ಮ ಸೇವೆಯನ್ನು
ಆಜ್ಞಾಪಿಸಿರಿ, ಶಿರಸಾ ವಹಿಸುವೆನು." "ಎಲೈ ರಾಜನೇ,
ಸತ್ಯವನ್ನೇ ನುಡಿದಿರುವೆ. ರಾಕ್ಷಸರಿಂದ ನನ್ನ ಯಜ್ಞವು ಪುನಃಪುನಃ
ನಾಶಗೊಳಿಸಲ್ಪಡುತ್ತಲಿದೆ. ಯಜ್ಞರಕ್ಷಣೋದ್ದೇಶದಿಂದ ನಾನು ನಿನ್ನ
ಸಹಾಯವನ್ನು ಅಪೇಕ್ಷಿಸಿ ಬಂದಿದ್ದೇನೆ. ಶಂಭುವರದಿಂದ ಅವಧ್ಯರಾದ
ಆ ರಾಕ್ಷಸರಲ್ಲಿ ನನ್ನ ಶಾಪವು ನೀರಿನಲ್ಲಿ ಅಗ್ನಿಯಂತೆ ನಿಷ್ಪ್ರಯೋಜನವಾ
ಗಿದೆ. ಇವರ ವಧೆಗಾಗಿ ನಿನ್ನ ಜ್ಯೇಷ್ಠಪುತ್ರನಾದ ಶ್ರೀರಾಮನನ್ನು
ಕಳುಹಿಸಿಕೊಡು. ಇದರಿಂದ ನಿನಗೆ ನಿಜವಾಗಿಯೂ ಶ್ರೇಯಸ್ಸುಂಟು.
ಹೇ ರಾಜಾ, ಶ್ರೀರಾಮನು ವೇದ್ಯೈಕಗಮ್ಯನೆಂಬುದನ್ನು ನಾನು ಅರಿತಿ
ದ್ದೇನೆ. ನಿನ್ನ ಗುರುವಾದ ವಸಿಷ್ಠರು ತಿಳಿದಿದ್ದಾರೆ" ಎಂದು ವಿಶ್ವಾಮಿ
ತ್ರನು ನುಡಿದನು. ಮುಂಬರುವ ಪುತ್ರವಿರಹವನ್ನು ಭಾವಿಸಿ ರಾಜನು
ಮೂರ್ಛೆಹೊಂದಿದನು. ಸ್ವಲ್ಪಹೊತ್ತಿನಲ್ಲಿಯೇ ಎಚ್ಚೆತ್ತ ನರಪಾಲನು
ನಿಟ್ಟುಸಿರು ಬಿಡುತ್ತಾ, "ಹೇ ಮುನೇ, ನನ್ನ ರಾಮನು ಎಳೆವಯಸ್ಸಿನ
ಸುಕುಮಾರನು. ಸುಖದಲ್ಲಿಯೇ ಬೆಳೆದವನು. ಶಸ್ತ್ರಾಸ್ತ್ರಗಳನ್ನರಿಯದ
ಹಸುಳೆ. ಯುದ್ಧವೆಂದರೇನೆಂಬುದನ್ನೇ ತಿಳಿಯದ ಕಂದಮ್ಮ. ನಾನಾ
ದರೋ ಒಂಬತ್ತುಸಹಸ್ರ ವರ್ಷಕಾಲ ಪುತ್ರೇಚ್ಛೆಯಿಂದ ಪರಿತಪಿಸಿ
ಇದೀಗ ರಾಮಮುಖೇಂದುವಿನಿಂದ ಸಂತಸಗೊಂಡಿದ್ದೇನೆ. ಹೇ ಬ್ರಹ್ಮನ್,
ಇವನನ್ನಗಲಿ ನಾಸಿರಲಾರೆ. ಮಾಯಾವಿಗಳಾದ ರಾಕ್ಷಸರೊಡನೆ ಯುದ್ಧ
ಮಾಡಲು ಈ ಬಾಲಕನು ಶಕ್ತನಾಗಲಾರನು. ಯುದ್ಧಕುಶಲನಾದ ನಾನೇ
ಚತುರಂಗಬಲಸಹಿತನಾಗಿ ನಿಮ್ಮೊಡನೆ ಬಂದು ಯಜ್ಞಸಂರಕ್ಷಣೆ ಮಾಡು
ತ್ತೇನೆ. ಆ ರಾಕ್ಷಸರು ರಾವಣನನ್ನು ಆಶ್ರಯಿಸಿ ನಿಮ್ಮ ಯಜ್ಞನಾಶದಲ್ಲಿ
ಪ್ರವೃತ್ತರಾಗಿದ್ದರಂತೂ ಸರ್ವನಾಶವಾದಂತೆಯೇ. ಜಗತ್ತೇ ತಲೆಕೆಳಗಾ
ದಂತೆ ಸರಿ. ಈ ರಾವಣನ ಹೆಸರನ್ನು ಕೇಳಿದ ಮಾತ್ರದಿಂದಲೇ ಇಂದ್ರಾದಿ

ದೇವತೆಗಳೇ ಓಡುತ್ತಾರೆ. ಇಂತಹವನೊಡನೆ ನಿಷ್ಕಾರಣವಾಗಿ ನಾನೆಂತು
ವೈರ ಬೆಳೆಸಲಿ? ಆದರೆ ನನ್ನೀ ಕ್ಷತ್ರಿಯದೇಹವು ಗೋಬ್ರಾಹ್ಮಣರ ಹಿತ
ಕ್ಕಾಗಿಯೇ ಮೀಸಲಿದೆ. ಪ್ರಾಣವಿರುವವರೆಗೂ ನಿಮ್ಮ ಶತ್ರುಗಳೊಡನೆ
ಹೋರಾಡುತ್ತೇನೆ. ರಾಮನನ್ನು ಮಾತ್ರ ಕೇಳಬೇಡಿರಿ" ಎಂದು ದೈನ್ಯ
ದಿಂದ ಪ್ರಾರ್ಥಿಸಿದನು. ಮೊದಲೇ ರಾಕ್ಷಸ ಶುಷ್ಕವೃಕ್ಷದಿಂದ ಜ್ವಲಿಸುತ್ತಿದ್ದ
ಆ ತಾಪಸಾನಲವು ಈ ಮಾತುಗಳನ್ನು ಕೇಳಿ ಕೆರಳಿತು. ಇದನ್ನರಿತ
ವಸಿಷ್ಠನು ರಾಜನನ್ನು ಕುರಿತು, "ಹೇ ರಾಜಾ, ಈ ಋಷಿಯ ಮನೋ
ಭೀಷ್ಟವನ್ನು ಸಲ್ಲಿಸುವೆನೆಂದು ಪ್ರತಿಜ್ಞೆ ಮಾಡಿದ್ದೀಯೆ. ಇವನಾಚರೋ
ಯಜ್ಞರಕ್ಷಣಾರ್ಥಿಯಾಗಿ ಬಂದಿರುವನು. ಉತ್ತಮ ಹರಿಭಕ್ತನಾಗಿದ್ದಾನೆ.
ಇಂತಹವನಿಗೆ ಮಾತುಕೊಟ್ಟು ತಪ್ಪುವುದುಚಿತವಲ್ಲ. ನಿನ್ನ ಮಗನ
ತೇಜಸ್ಸು ಈವರೆಗೆ ಗೂಢವಾಗಿದೆ. ಈ ಮುನಿಯು ಮುನಿದರೆ ಚತುರ್ದಶ
ಲೋಕಗಳನ್ನೂ ದಹಿಸಬಲ್ಲನು. ಈ ಶಕ್ತಿಯೂ ನಿನ್ನ ಮಗ ರಾಮನ
ಅನುಗ್ರಹರೂಪವಾದುದೇ. ಈ ಋಷಿಯು ನಾರಾಯಣಪರಾಯಣನೂ,
ತೇಜಸ್ವಿಯೂ ಆಗಿದ್ದಾನೆ. ಈ ಬ್ರಹ್ಮಋಷಿಯು ಕ್ಷತ್ರಿಯನಾಗಿದ್ದಾಗಲೇ
ದಕ್ಷಕನ್ಯೆಯರಾದ ಜಯಾ, ಸುಪ್ರಭೆಯರಿಂದ ಒಂದು ನೂರು ದಿವ್ಯಾಸ್ತ್ರ
ಗಳನ್ನೂ, ಅನೇಕ ಇತರ ಅಸ್ತ್ರಗಳನ್ನೂ ಪಡೆದಿರುತ್ತಾನೆ. ಎಲೈ
ರಾಜೇಂದ್ರ, ಶ್ರೀರಾಮನು ಈ ಮುನಿಯೊಡನೆ ಹೋಗಲಿ. ರಾಕ್ಷಸ
ಸಮೂಹವನ್ನು ಜಯಿಸಿ ಯಜ್ಞವನ್ನು ಸಂರಕ್ಷಿಸಲಿ" ಎಂದು ನುಡಿದನು.
ವಸಿಷ್ಠರ ನುಡಿಗಳನ್ನು ಕೇಳಿ ಪ್ರೀತನಾದ ದಶರಥನು ರಾಮನನ್ನು ವಿಶ್ವಾ
ಮಿತ್ರರಿಗೆ ಅರ್ಪಿಸಿದನು. ಲಕ್ಷ್ಮಣನೂ ಅವನೊಂದಿಗೆ ಹೊರಟನು.
ಕಿಶೋರರಾದರೂ ಶೂರರಾದ ರಾಮಲಕ್ಷ್ಮಣರು ಕೋದಂಡಪಾಣಿಗಳಾ
ದರು. ಬತ್ತಳಿಕೆಗಳನ್ನು ಧರಿಸಿದರು. ಸಲ್ಲಾಪಗಳಿಂದ ಮಂದಸ್ಮಿತ
ರಾಗಿ ಮುನಿಯನ್ನು ಹಿಂಬಾಲಿಸಿದರು. ಹಿಂದೆ ಬೃಹಸ್ಪತ್ಯಾಚಾರ್ಯರನ್ನು
ಅನುಸರಿಸಿದ ಉಪೇಂದ್ರ, ಇಂದ್ರರಂತೆ ಕಂಗೊಳಿಸಿದರು. ರಾಜಬೀದಿ
ಯಲ್ಲಿ ನಡೆದ ಇವರನ್ನು ನೋಡಿ ಪ್ರಜೆಗಳು ಆನಂದಿಸಿದರು.

**ಮಂತ್ರೋಪದೇಶ-ಅನಂಗಾಶ್ರಮದರ್ಶನ**

ಅಯೋಧ್ಯೆಯನ್ನು ಬಿಟ್ಟು, ಒಂದೂವರೆ ಯೋಜನ ಪ್ರಯಾಣಮಾಡಿ ರಾಮಲಕ್ಷ್ಮಣ ಸಹಿತನಾದ ವಿಶ್ವಾಮಿತ್ರನು ಸರಯೂ ನದೀ ತೀರವನ್ನು ಸೇರಿದನು. ಅಲ್ಲಿ ರಾಮಲಕ್ಷ್ಮಣರಿಗೆ ಬಲ, ಅತಿಬಲಗಳೆಂಬ ಮಂತ್ರಗಳನ್ನು ಉಪದೇಶಿಸಿದನು. ಹಸಿವೆ, ನೀರಡಿಕೆಗಳನ್ನು ಪರಿಹರಿಸಬಲ್ಲ ಈ ಮಂತ್ರಗಳು ವಿಶ್ವಾಮಿತ್ರನಿಗೆ ಬ್ರಹ್ಮನಿಂದ ಉಪದಿಷ್ಟವಾದವುಗಳು. ಲಕ್ಷ್ಮೀಪತಿಯಾದ ಶ್ರೀರಾಮನು ಸರ್ವಜ್ಞನೂ, ಪೂರ್ಣಕಾಮನೂ ಆದರೂ ಲೋಕಶಿಕ್ಷಣಾರ್ಥವಾಗಿ ಈಮಂತ್ರಗಳನ್ನು ಉಪದೇಶಗೊಂಡನು. ಆ ಸರಯೂ ತೀರದಲ್ಲಿ ರಾಮಲಕ್ಷ್ಮಣರು ವಿಶ್ವಾಮಿತ್ರನಿಂದ ಲಾಲಿತರಾದರು. ಪ್ರಾತಃಕಾಲ ಸಂಧ್ಯಾದಿಕೃತ್ಯಗಳನ್ನು ಮುಗಿಸಿಅಲ್ಲಿಂದ ಹೊರಟು ಮಹಾತೇಜಸ್ವಿಗಳಾದ ಆ ರಾಜಕುಮಾರರು ಋಷಿಯೊಡನೆ ಸರಯೂಗಂಗಾ ಸಂಗಮವನ್ನು ಸೇರಿದರು. ಕಾಮಾರಿಯ ನೇತ್ರಾಗ್ನಿಯಿಂದ ಅನಂಗನು ಅನಂಗತ್ವವನ್ನು ಹೊಂದಿದ ಸ್ಥಳವಿದು. ಅಲ್ಲಿ ಅವರು ಆ ರಾತ್ರಿ ವಿಶ್ರಮಿಸಿದರು. ಪ್ರಭಾತವಾಗಲು ರಾಮನನ್ನು ಸಾಕ್ಷಾತ್ ಹರಿಯೆಂದು ತಿಳಿದ ಅಲ್ಲಿಯ ಮುನಿಕುಲವು ಪೂಜಿಸಿತು. ನವದ್ಯುಸಾಥನ ಪ್ರಭೆಯಿಂದೊಪ್ಪುವ ಶ್ರೀರಾಮನ ಮುಖದಲ್ಲಿ ಸೂರ್ಯಾಂತರ್ಗತ ನಾರಾಯಣನನ್ನು ಚಿಂತಿಸಿ ತಮ್ಮ ಆಹ್ನೀಕಗಳನ್ನೆಸಗಿದರು. ಸರಯೂನದಿಯ ಮಂಜುಳ ನಿನದವು ಗಂಗೆಯ ಗಾಂಭೀರ್ಯದೊಂದಿಗೆ ಸೇರಿ ಶೋಭಿಸುತ್ತಿರಲು, ರಾಜಕುಮಾರರು ಮುನಿಸಹಿತವಾಗಿ ನಾವೆಯನ್ನೇರಿ ಗಂಗೆಯನ್ನು ದಾಟಿದರು

**ತಾಟಕಾದರ್ಶನ ಮತ್ತು ವಧೆ**

ಕೆಲದೂರ ನಡೆದು ಬರಲು ಘೋರಾರಣ್ಯವೊಂದು ಗೋಚರಿಸಿತು. ಅವನವಾವುದೆಂದು ರಾಮಚಂದ್ರನು ಮುನಿ ಶಾರ್ದೂಲನನ್ನು ಪ್ರಶ್ನಿಸಿದನು. ವಿಶ್ವಾಮಿತ್ರನು, "ಎಲೈ ರಾಮನೇ, ಪೂರ್ವದಲ್ಲಿ ಇವು ಮಲದ, ಕರೂಶವೆಂಬ ಇಂದ್ರಪೋಷಿತ ಪ್ರದೇಶಗಳಾಗಿದ್ದವು. ಈಗಲಾದರೋ

ತಾಟಕಿಯೆಂಬ ಘೋರರಕ್ಕಸಿಯ ಆವಾಸವಾಗಿದೆ. ಈಕೆಯು ಸುಕೇತು ವೆಂಬ ಯಕ್ಷನ ಮಗಳು. ಬ್ರಹ್ಮವರದಿಂದ ಅವಧ್ಯಳಾಗಿದ್ದಾಳೆ. ಹತ್ತು ಸಾವಿರ ಆನೆಗಳ ಬಲವುಳ್ಳವಳು. ಸುಂದನೆಂಬ ಅಸುರನ ಪತ್ನಿಯಾದ ಈಕೆಯು ಅಗಸ್ತ್ಯಋಷಿಯ ಶಾಪದಿಂದ ರಾಕ್ಷಸಿಯಾದಳು. ತನ್ನ ಮಗ ನಾದ ದುಷ್ಟ ಮಾರೀಚನೊಂದಿಗೆ ಇಲ್ಲಿ ವಾಸವಾಗಿರುವಳು. ಈ ಮಾತಾ ಪುತ್ರರು ನಿರ್ದಯರಾಗಿ ಮನುಷ್ಯರನ್ನು ತಿನ್ನುತ್ತಾರೆ. ಇಗೋ ನೋಡು, ಇಲ್ಲಿ ಕಾಣುವ ಬೆಟ್ಟದಂತಹ ತಲೆಮೂಳೆಗಳ ರಾಶಿಯನ್ನು. ಮಹಾ ಕ್ರೂರಿಗಳಾದ ಇವರ ಕೃತ್ಯಗಳ ಅರಿವಾಯಿತೇ? ರಾಮಾ?" ಎಂದು ನುಡಿದು ಸುಮ್ಮನಾದನು. ಮುನಿಜನಪ್ರಿಯನಾದ ಶ್ರೀರಾಮನು ಲಕ್ಷ್ಮಣ ಸಹಿತನಾಗಿ ತಾಟಕಾಭವನವಾದ ಆ ಅರಣ್ಯವನ್ನು ಹೊಕ್ಕು ಧನು ಷ್ಟಂಕಾರ ಮಾಡಿದನು. ತಾಟಕಿಯ ಕಿವಿಯಲ್ಲಿ ಕಾದ ಸೀಸವನ್ನು ಸುರಿದಂತಾಯಿತು. ಭಯಗೊಂಡ ಆ ನಿಶಾಚರಿಯು ಶೀಘ್ರವಾಗಿ ಮೇಲೆ ಬಿದ್ದಳು. ವಿಸ್ತಾರವಾಗಿ ತೆರೆದ ಬಾಯಿ, ಎತ್ತಿದ ಕೈಗಳುಳ್ಳ ಆ ಮಹಾ ಕಾಯಳನ್ನು ನೋಡಿಯೂ ಶ್ರೀರಾಮನು ನಿರಾಕುಲನಾಗಿ ನಿಂತನು. ಆ ತಾಟಕಿಯು ಕೋಲಾಹಲಧ್ವನಿಗೈದು ವೇಗದಿಂದ ರಾಮನೆಡೆಗೆ ಸಾಗಿ ಅವನ ಮೇಲೆ ಧೂಳಿನ ಮಳೆಗರೆದಳು. ಪುನಃ ಆ ಮಾಯಾವಿನಿಯು ಕಲ್ಲಿನ ಮಳೆಗರೆದಳು ಪನ್ನಗಾರಿಧ್ವಜನಾದ ಶ್ರೀರಾಮನು ಎರಡು ಬಾಣಗಳಿಂದ ಅತಿಘೋರವಾದ ಅವಳ ಕೈಗಳನ್ನು ಕತ್ತರಿಸಿದನು. ಆ ಕಾಮರೂಪಿಣಿಯು ಅದೃಶ್ಯಳಾಗಿ ಆಯುಧಗಳನ್ನು ಸುರಿಸಿದಳು. ಸ್ತ್ರೀ ವಧಾಲಜ್ಜಿತನಾಗಿ ನಿಂತ ರಾಮನನ್ನು ಕುರಿತು ಆ ಮುನಿಯು, "ಹೇ ವತ್ಸ! ಸಜ್ಜನಶತ್ರುವಾದ ಇವಳನ್ನು ಬೇಗನೆ ಕೊಲ್ಲು" ಎಂದನು. ಮಂದ ಸ್ಮಿತನಾದ ಶ್ರೀರಾಮನು ಚಕ್ರದಂತೆ ಸುತ್ತುತ್ತಲಿದ್ದ ಆ ಪಿಶಾಚಸ್ವರೂಪ ಳನ್ನು ನಿರಾಯಾಸವಾಗಿ ಶರಪಂಜರದಲ್ಲಿ ಹೂಗಿಸಿ, ಮೇಲೆ ಬೀಳುವ ದುಷ್ಟವ್ಯಕ್ತಿಯು ಪುರುಷನಾಗಲಿ, ಸ್ತ್ರೀಯಾಗಲಿ ವಧಾರ್ಹನೇ ಸರಿಯೆಂಬ ಧರ್ಮಮಾರ್ಗವನ್ನು ಲೋಕಕ್ಕೆ ತೋರುವವನಾಗಿ, ತನ್ನ ಕೂರಂಬಿನಿಂದ ಅವಳ ಹೃದಯಕವಾಟವನ್ನು ಸೀಳಿದನು. ದೇವತೆಗಳು ಜಯಕಾರ

ಗಳಿಂದ ಶ್ರೀರಾಮನನ್ನು ಸ್ತುತಿಸಿ ನಮಸ್ಕರಿಸಿದರು. ಈ ವಿಜಯಾಂಕು ರವು ಕಲ್ಪದ್ರುಮವಾಗಿ ಬೆಳೆಯಲೆಂದು ಕೋರಿ ಶ್ರೀರಾಮನ ಮೇಲೆ ಹೂಮಳೆಗರೆದರು.

## ಪ್ರಕರಣ ೫

### ಯಜ್ಞರಕ್ಷಣೆ–ಗಂಗಾವೃತ್ತಾಂತ

ಮುನಿಜನಪೂಜಿತನಾದ ಆ ಜಗನ್ನಾಥನು **ಸಿದ್ಧಾಶ್ರಮಾಗಮನ** ಲಕ್ಷ್ಮಣನೊಡನೆ ರಾತ್ರಿಯನ್ನು ತಾಟಕಾವನದಲ್ಲಿ ಕಳೆದನು. ಬೆಳಗಾಗುತ್ತಲೇ ಸಂಧ್ಯಾದಿ ಕರ್ಮ ಗಳನ್ನಾಚರಿಸಿದನು. ವಿಶ್ವಾಮಿತ್ರನು ಶ್ರೀರಾಮನಿಗೆ ವೈಷ್ಣವ, ಬ್ರಾಹ್ಮ ಶೈವ, ಆಗ್ನೇಯಾದಿ ಅಸ್ತ್ರಗಳನ್ನು ರಹಸ್ಯದಲ್ಲಿ ಉಪದೇಶಿಸಿದನು. ಉಪ ಸಂಹಾರಸಹಿತವಾದ ಇನ್ನೂ ಅನೇಕ ವಿಶೇಷಾಸ್ತ್ರಗಳನ್ನು ಸಹ ಉಪದೇಶಿ ಸಿದನು. ಸರ್ವಜ್ಞನೂ, ಸರ್ವಧಾರಕನೂ ಆದ ಶ್ರೀರಾಮನಿಗೆ ಈ ಉಪ ದೇಶದಿಂದ ಆಗಬೇಕಾದುದೇನೂ ಇರಲಿಲ್ಲ. ಆದರೆ ವಿಶ್ವಾಮಿತ್ರನು ಕೇವಲ ತನ್ನ ಕರ್ತವ್ಯತಾದೃಷ್ಟಿಯಿಂದ ಈ ಕಾರ್ಯವನ್ನೆಸಗಿದನು. ಅಸ್ತ್ರಾಭಿಮಾನಿಗಳಾದ ಬ್ರಹ್ಮಾದಿ ಸಮಸ್ತದೇವತೆಗಳೂ ಅಂಜಲಿಬದ್ಧರಾಗಿ ಶ್ರೀರಾಮನ ಸುತ್ತಲೂ ನಿಂತರು. ಬೃಹನ್ಮತಿಯಾದ ಲಕ್ಷ್ಮಣನೂ ವಿಶ್ವಾಮಿತ್ರನಿಂದ ಅಸ್ತ್ರೋಪದೇಶವನ್ನು ಪಡೆದನು. ಶ್ರೀರಾಮನು ತನ್ನ ಸುತ್ತಲೂ ನಿಂತಿದ್ದ ದೇವತೆಗಳಿಗೆ ಹೋಗಲಪ್ಪಣೆಯಿತ್ತು ಬರುತ್ತಾ ದೂರ ದಲ್ಲಿ ಆಶ್ರಮ ಒಂದನ್ನು ಕಂಡನು. ಆದಾವುದೆಂದು ವಿಶ್ವಾಮಿತ್ರನನ್ನು ಪ್ರಶ್ನಿಸಿದನು. ಗಾಧಿಸುತನು "ಹೇ ವತ್ಸ, ಇದು ಪರಮಾಶ್ರಮವು. ಪೂರ್ವದಲ್ಲಿ ಸೃಷ್ಟ್ಯಾದಿಕರ್ತನಾದ ಶ್ರೀಹರಿಯು ನೆಲಸಿದ್ದ ಸ್ಥಾನವು. ಇಲ್ಲಿ ತಪವನ್ನಾಚರಿಸಿ ಅನೇಕ ಸಿದ್ಧರು ತಪಸ್ಸಿದ್ಧಿಯನ್ನು ಪಡೆದರು. ಆದುದ ರಿಂದ ಇದನ್ನು ಸಿದ್ಧಾಶ್ರಮವೆನ್ನುವರು. ತಪಸ್ಸಿದ್ಧಿಯನ್ನು ದಯಪಾಲಿ ಸುವವನೂ ಶ್ರೀಹರಿಯಷ್ಟೇ? ಹಿಂದೆ ಬಲಿಯಿಂದ ಪೀಡಿತರಾದ ದೇವತೆ

ಗಳು ಶ್ರೀಹರಿಯನ್ನು ಮರೆಹೊಕ್ಕು ಸ್ತುತಿಸಿದರು. ಪ್ರಸನ್ನನಾದ ಆ
ದೇವೋತ್ತಮನು ಕಶ್ಯಪಋಷಿಯಿಂದ ಅದಿತಿಯಲ್ಲಿ ಮಗನಾಗಿ ಅವತರಿಸಿ
ದನು. ಈತನೇ ದೇವದ್ವೇಷಿಗಳ ಶತ್ರುವಾದ ವಾಮನನು. ಮೂರು
ಪಾದ ಭೂಮಿಯನ್ನು ಬೇಡಿ ಬಲಿಯಿಂದ ಪಡೆದನು. ಅಣೋರಣೀ
ಯನೂ, ಮಹತೋಮಹೀಯನೂ ಆದ ಈತನು ವಿಶ್ವವ್ಯಾಪಕವಾದ
ತ್ರಿವಿಕ್ರಮರೂಪವನ್ನು ತಾಳಿ ಬಲಿಯನ್ನು ಅನುಗ್ರಹಿಸಿದನು. ಹೇ ಚಿತ್ರ
ಪರಾಕ್ರಮಿಯೇ! ಆ ತ್ರಿವಿಕ್ರಮನ ಸ್ಥಾನವಿದು. ನಾನೂ ಮತ್ತು ಇನ್ನೂ
ಅನೇಕ ಋಷಿಗಳೂ ಇಲ್ಲಿಯೇ ವಾಸವಾಗಿದ್ದೇವೆ." ಹೀಗೆಂದು ಹೇಳಿ
ಆ ರಾಜಕುಮಾರರೊಡನೆ ಸೂರ್ಯಾಸ್ತಮಯಕಾಲದಲ್ಲಿ ಆಶ್ರಮವನ್ನು
ಹೊಕ್ಕನು. ಶ್ರೀರಾಮಲಕ್ಷ್ಮಣರನ್ನು ಕಂಡ ಆಶ್ರಮವಾಸಿಗಳು ವಿಶೇಷ
ವಾಗಿ ಆನಂದಿಸಿದರು.

**ಯಜ್ಞರಕ್ಷಣೆ**

ಮಾರನೇದಿನ ವಿಶ್ವಾಮಿತ್ರನು ಸಪ್ತಋಷಿಗಳಿಂದ ಕೂಡಿ
ಆರುದಿನಗಳವರೆಗೂ ನಡೆಯಬೇಕಾದ ಯಜ್ಞವನ್ನು
ಶ್ರೀರಾಮನ ಆಜ್ಞೆಯಿಂದ ಪ್ರಾರಂಭಿಸಿದನು.
ರಾಮಲಕ್ಷ್ಮಣರು ಯಜ್ಞರಕ್ಷಕರಾಗಿ ನಿಂತರು. ಆರನೆಯ ದಿನ
ಕಲಾಭಿಪೂರ್ಣವಾದ ಯಜ್ಞವೇದಿಕೆಯು ಅಗ್ನಿಯಿಂದ ವಿಶೇಷವಾಗಿ
ಶೋಭಿಸುತ್ತಲಿದೆ. ಇನ್ನೇನು ಪೂರ್ಣಾಹುತಿ ಹಾಕಬೇಕೆನ್ನುವುದ
ರಲ್ಲಿ ಹಠಾತ್ತನೆ ದೊಡ್ಡದಾದ ಹಾಹಾಕಾರವೆದ್ದಿತು ಅಂಬರದಲ್ಲಿ
ಕಲಕಲಶಬ್ದವಾಯಿತು ಅಲ್ಲಿ ಸುಬಾಹು ಮಾರೀಚರು ಕಾಣಿಸಿಕೊಂಡರು.
ಕೂಡಲೇ ಲಕ್ಷ್ಮಣನಿಗೆ ಸಿದ್ಧನಾಗುವಂತೆ ಹೇಳಿ ಶ್ರೀರಾಮನು ಧನುಸ್ಸನ್ನು
ಹಿಡಿದನು. ಯಜ್ಞವು ರಾಕ್ಷಸರಿಂದ ಅಪವಿತ್ರವಾಗುವ ಮುನ್ನವೇ
ಯಜ್ಞೇಶ್ವರನಾದ ಶ್ರೀರಾಮನು ಅವರ ಮೇಲೆ ಕ್ರೂರವಾದ ಬಾಣಗಳನ್ನು
ಬಿಟ್ಟನು. ಒಂದೇ ಬಾಣದಿಂದ ನೂರು ಯೋಜನ ಒಯ್ಯಲ್ಪಟ್ಟ ದುಷ್ಟ
ಮಾರೀಚನು ಸತ್ತೆನೆಂದು ಚೀರಿ ಸಮುದ್ರದಲ್ಲಿ ಮುಳುಗಿದನು. ಅಗ್ನಿ
ಸದೃಶವಾದ ಇನ್ನೊಂದು ಬಾಣದಿಂದ ಶ್ರೀರಾಮನು ಬಲಶಾಲಿಯಾದ
ಸುಬಾಹುವನ್ನು ಯಮಸದನಕ್ಕಟ್ಟಿದನು. ತಾಲವೃಕ್ಷಗಳಿಂದ ಹಣ್ಣು

ವಾದ, ಸುಂದರವೂ, ವಿಸ್ತಾರವೂ, ಸಂಪದ್ಯುಕ್ತವೂ ಆದ ವೈಶಾಲೀಪುರಿ ಯನ್ನು ಪ್ರವೇಶಿಸಿದನು. ಕೌಶಿಕನು ರಾಘವನಿಗೆ ವಿಶಾಲನ ಪೂರ್ವ ವೃತ್ತಾಂತವನ್ನು ವಿವರಿಸಿದನು. "ಪೂರ್ವದಲ್ಲಿ ದೇವಾಸುರರು ಅಮೃತ ಕ್ಕಾಗಿ ಸಮುದ್ರಮಥನ ಮಾಡಿದರು ಮಂದರವನ್ನು ಕಡೆಗೋಲಾಗಿಯೂ, ಸರ್ಪಾಧಿಪನಾದ ವಾಸುಕಿಯನ್ನು ಹಗ್ಗವಾಗಿಯೂ ಉಪಯೋಗಿಸಿದರು. ನೀರಿನಲ್ಲಿ ಮುಳುಗುವ ಮಂದರಪರ್ವತವನ್ನು ಕೂರ್ಮರೂಪದಿಂದ ಶ್ರೀ ಹರಿಯು ಎತ್ತಿಹಿಡಿದು ಮಥನಕಾರ್ಯಕ್ಕೆ ಅನುಕೂಲನಾದನು. ದೇವ ದಾನವರು ಶ್ರಾಂತರಾಗಲು ಶ್ರೀಹರಿಯೇ ಅಜಿತರೂಪದಿಂದ ಸರ್ಪವನ್ನು ಹಿಡಿದು ದಿವ್ಯಕಂಕಣಭೂಷಿತವಾದ ತನ್ನ ಕೈಗಳಿಂದ ಕಡೆದನು ಇದರಿಂದ ಚಂದ್ರ, ಇಂದಿರೆ, ಅಪ್ಸರೆಯರೇ ಮೊದಲಾದ ವಸ್ತುಗಳು ಉದ್ಭವಿಸಿದವು. ಕೊನೆಗೆ ಧನ್ವಂತರಿರೂಪದಿಂದ ಶ್ರೀಹರಿಯು ಅಮೃತಕಲಶಹಸ್ತನಾಗಿ ಉದ್ಭವಿಸಿದನು. ದೈತ್ಯರು ದುರಾಶೆಯಿಂದ ಅಮೃತಕಲಶವನ್ನ ಪಹರಿಸಿ ಕೊಂಡು ಓಡಿದರು. ಅಸುರಾಂತಕನು ಜಗನ್ಮೋಹಿನಿಯಾಗಿ ತನ್ನ ರೂಪ ಲಾವಣ್ಯಗಳಿಂದ ದೈತ್ಯರನ್ನು ಮೋಹಗೊಳಿಸಿ ಸ್ವಭಕ್ತರಾದ ದೇವತೆಗಳಿಗೆ ಅಮೃತವನ್ನು ದೊರಕಿಸಿದನು ಯುದ್ಧವನ್ನು ಹೂಡಿದ ದೈತ್ಯರೆಲ್ಲರೂ ರಣದಲ್ಲಿ ಮಡಿದರು. ಹತಪುತ್ರಳಾದ ದಿತಿಯು ದೇವೇಂದ್ರನನ್ನು ನಾಶ ಮಾಡುವ ಮಗನನ್ನು ಪಡೆಯಬೇಕೆಂದು ಸಂಕಲ್ಪಿಸಿದಳು. ಪತಿದೇವ ನನ್ನು ಸೇವಿಸಿ ಅವನ ಅನುಗ್ರಹದಿಂದ ಗರ್ಭವತಿಯಾದಳು ಗರ್ಭಿಣಿ ಯಾದ ಚಿಕ್ಕಮ್ಮನ ಸೇವೆಗೆ ಇಂದ್ರನೇ ನಿಂತನು. ಒಮ್ಮೆ ಅವಳು ವ್ರತ ತಪ್ಪಿ ಮಲಗಿರಲು ಅವಳ ಉದರವನ್ನು ಪ್ರವೇಶಿಸಿ ಗರ್ಭವನ್ನು ಸೀಳಿ ದನು. ಗರ್ಭವು ನಲವತ್ತೊಂಬತ್ತು ತುಂಡಾಗಿ ಒಡೆದು ಗರ್ಭಗತ ಮಕ್ಕಳು ರೋದಿಸಲು "ಮಾರೋದೀಃ"-ಎಂದರೆ ಅಳಬೇಡಿರೆಂದು ಇಂದ್ರನೆಂದನು. ಆದುದರಿಂದಲೇ ಇವರು "ಮರುತ"ರೆಂದು ಪ್ರಸಿದ್ಧರಾದ ಇಂದ್ರಸಖರಾ ದರು. ಹೀಗೆ ದೈವಭಕ್ತರಿಗೆ ಉತ್ತಮ ಸಂಪದಗಳೇ ದೊರೆಯುವುವು. ಸಮುದ್ರಮಥನಕಾಲದಲ್ಲಿ ಉದ್ಭವಿಸಿದ ಅಪ್ಸರೆಯರಲ್ಲಿ ಅಲಂಬುಸಾ ಎಂಬುವಳು ಅತಿಸುಂದರಿ. ನಿನ್ನ ಪೂರ್ವಜನಾದ ಇಕ್ಷ್ವಾಕುವಿನಿಂದ

ಇವಳಲ್ಲಿ ವಿಶಾಲನೆಂಬ ರಾಜಕುಮಾರನುದಯಿಸಿದನು. ಈ ನಗರವು ಅವನಿಂದ ನಿರ್ಮಿತವಾದುದು'' ಹೀಗೆ ಮಾತನಾಡಿಕೊಳ್ಳುತ್ತಾ ವಿಶಾಲಾ ನಗರವನ್ನು ಹೊಕ್ಕ ಈ ಪುರುಷಶ್ರೇಷ್ಠರನ್ನು ಕಂಡು ವಿಶಾಲಕುಲಸಂಭೂತನಾದ ಜ್ಞಾನಿಯೂ ಆದ ಸುಮತಿಯು ಇವರನ್ನು ಪೂಜಿಸಿದನು. ವಿಶ್ವಾಮಿತ್ರನು ಸುಮತಿಗೆ ರಾಮಲಕ್ಷ್ಮಣರ ಪರಿಚಯ ಮಾಡಿಸಿದನು. ಆ ರಾತ್ರಿ ಅಲ್ಲಿ ಕಳೆದು ಪ್ರಾತಃಕಾಲ ಅಲ್ಲಿಂದ ಹೊರಟು ಮಂದಮಾರುತನಿಂದ ಉಪಸೇವಿತವಾದ ಮಿಥಿಲಾಪಟ್ಟಣದ ಗಡಿಯನ್ನು ಸೇರಿದರು. ಮಿಥಿಲೋಪವನ ಪ್ರಾಂತದಲ್ಲಿ ಆಶ್ರಮವೊಂದು ಕಂಗೊಳಿಸಿತು. ಅದರ ವಿಷಯವನ್ನು ಪ್ರಸ್ತಾಪಿಸುತ್ತಾ ಗಾಧಿಪುತ್ರನು ಮಧುಸೂದನನನ್ನು ಕುರಿತು ಮಧುರವಚನಗಳಿಂದ ಹೀಗೆಂದನು.

**ಅಹಲ್ಯೋದ್ಧಾರ**

"ಎಲೈ ರಾಮಚಂದ್ರ, ಇಲ್ಲಿ ಕಂಗೊಳಿಸುವುದೇ ಗೌತಮರ ಆಶ್ರಮ. ಒಮ್ಮೆ ಈ ಋಷಿಯು ತನ್ನ ಯೋಗ್ಯತೆಗೆ ಮಿಕ್ಕ ಉತ್ತಮ ತಪಸ್ಸನ್ನಾಚರಿಸಿದನು. ಇದು ಅವನಿಗೂ ಶ್ರೇಯಸ್ಕರವಲ್ಲ ಆದುದರಿಂದಲೇ ದೇವತೆಗಳೂ ಇದನ್ನು ಸಹಿಸದಾದರು. ಹೆಚ್ಚಿನ ತಪಸ್ಸನ್ನು ಅಪಹರಿಸುವ ದೇವಕಾರ್ಯಕ್ಕಾಗಿ ಸುರಪತಿಯು ಗೌತಮರಿಲ್ಲದ ಕಾಲವನ್ನು ಸಾಧಿಸಿ ಆಶ್ರಮವನ್ನು ಪ್ರವೇಶಿಸಿ ಅವರ ಪತ್ನಿಯಾದ ಅಹಲ್ಯೆಯಲ್ಲಿ ಜಾರತ್ವವನ್ನೆಸಗಿದನು. ಮನೆಗೆ ಹಿಂದಿರುಗಿದ ಗೌತಮರು ಇದನ್ನರಿತು ಜಾರನಾದ ದೇವೇಂದ್ರನು ವಿಫಲನಾಗುವಂತೆಯೂ, ಜಾರಿಣಿಯಾದ ತನ್ನ ಪತ್ನಿಯು ಕಲ್ಲಾಗುವಂತೆಯೂ ಶಪಿಸಿದನು. ಮುಂದೆ ರಾಮದರ್ಶನದಿಂದ ಉದ್ಧೃತಳಾಗುವಂತೆ ವಿಶಾಪವನ್ನೂ ಕರುಣಿಸಿದನು ಹೀಗೆ ಸುರಪತಿಗೆ ಶಾಪವನ್ನಿತ್ತ ಗೌತಮನು ಅತಿರಿಕ್ತವಾದ ತಪಸ್ಸನ್ನು ಕಳೆದುಕೊಂಡನು ದೇವಕಾರ್ಯಕ್ಕಾಗಿ ಶಪ್ತನಾದ ದೇವೇಂದ್ರನಿಗೆ ಪಿತೃಗಳೂ, ದೇವತೆಗಳೂ ತಮ್ಮ ಯೋಗಶಕ್ತಿಯಿಂದ ಪುರುಷತ್ವವನ್ನು ದಯಪಾಲಿಸಿದರು. "ಹೇ ಭಕ್ತವತ್ಸಲ, ಇಂದ್ರನ ಈ ಮನೋಶಲ್ಯವನ್ನು ಹೋಗ

ಲಾಡಿಸು ಕಲ್ಯಾಣಿಯಾದ ಅಹಲ್ಯೆಯಲ್ಲಿ ದಯೆದೋರು. ನೀನು ಕರುಣಾಸಮುದ್ರನಷ್ಟೆ!" ಇದನ್ನು ಕೇಳಿದ ಶ್ರೀರಾಮನು, ಹರ್ಷದಿಂದ ಆಶ್ರಮವನ್ನು ಹೊಕ್ಕು, ತನ್ನ ಅಪಾಂಗನೋಟವನ್ನು ಬೀರಲು, ಅಹಲ್ಯೆಯು ಶುದ್ಧಳಾಗಿ ಸಹಜಸ್ತ್ರೀರೂಪದಿಂದ ಪತಿಪ್ರೇಮಪರಾಯಣೆಯಾದಳು. ಭ್ರೂವಿಲಾಸಮಾತ್ರದಿಂದ ವಿಶ್ವಸಂಚಾಲನಗೈವ ಶ್ರೀರಾಮನಿಗೆ ಇದೇನಾಶ್ಚರ್ಯವು?! ಗೌತಮನು ಭಕ್ತಿಭರಿತನಾಗಿ ಪತ್ನಿಯೊಡನೆ ಉದಾರಚರಿತನಾದ ಶ್ರೀರಾಮನನ್ನು ಪೂಜಿಸಿದನು. ಉಪಕಾರವನ್ನು ಸ್ಮರಿಸಿ ವಿಶ್ವಾಮಿತ್ರನನ್ನು ಸನ್ಮಾನಿಸಿದನು.

**ಅಪೂರ್ವಪೂರುಷ ನೊಡನೆ ಜನಕ ಸಮಾಗಮ**

ಅಲ್ಲಿಂದ ಮುಂದೆ ಸ್ವಲ್ಪ ದೂರ ನಡೆದು ಜನಕನ ಯಜ್ಞಸಭೆಯನ್ನು ಕಂಡರು. ಜನಭರಿತವಾದ ಯಜ್ಞಸಭೆಯಿಂದ ಸ್ವಲ್ಪದೂರದಲ್ಲಿ ರಾಮಲಕ್ಷ್ಮಣರು ಮುನಿಯೊಡನೆ ವಿಶ್ರಮಿಸಿದರು ಅಲೌಕಿಕ ಪುರುಷನೊಡನೆ ವಿಶ್ವಾಮಿತ್ರನು ಬಂದಿರುವನೆಂದು ಕೇಳಿ ಜನಕನು ಶತಾನಂದರೇ ಮೊದಲಾದವರೊಡನೆ ಅವರನ್ನು ಎದುರುಗೊಂಡನು. ನಾನಾ ದೇಶಗಳಿಂದ ಉತ್ಸವಕ್ಕಾಗಿ ಬಂದ ನರನಾರಿಯರು ಈ ಅಪೂರ್ವ ಪೂರುಷನನ್ನು ನೋಡಲು ಗುಂಪುಗುಂಪಾಗಿ ಬಂದರು. ಸಪರಿವಾರನಾದ ಮುನಿಯನ್ನು ಜನಕನು ಯಥಾವಿಧಿಯಾಗಿ ಪೂಜಿಸಿ ಲೋಕನಾಥನಾದ ಶ್ರೀರಾಮನನ್ನು ನೋಡಿ ಹೀಗೆಂದನು. "ಹೇ ಮುನೀ, ಈ ಪುರುಷ ಶ್ರೇಷ್ಠನಾರು? ಇಂದ್ರನೀಲಮಣಿಯಂತೆ ಶ್ಯಾಮಸುಂದರನೂ, ಪ್ರಫುಲ್ಲ ಪದ್ಮದಂತೆ ನಯನವುಳ್ಳವನೂ, ನವಯೌವನಯುಕ್ತನೂ ಆಗಿದ್ದಾನೆ. ಸಿಂಹಸ್ಕಂಧ; ವಿಶಾಲವಾದ ವಕ್ಷಸ್ಥಳ; ಪೂರ್ಣಚಂದ್ರನಂತೆ ಮುಖ; ಆಳವಾದ ನಾಭಿ; ಕಂಬುಕಂಠ; ಮತ್ತು ಮಹಾಭುಜಗಳಿಂದೊಪ್ಪುವ ಈತನಾರು? ಮಂದಹಾಸದಿಂದೊಪ್ಪುವ ಮುಖ; ಗಜರಾಜನಂತೆ ಗಮನ; ಅಮಿತಾರ್ಥವುಳ್ಳ ಮಿತನುಡಿ; ಇಂತಿರುವ ಈ ವಿನಯೋಪೇತನಾರು? ಅಂಗನೆಯರಿಗೆ ಅನಂಗನಂತೆಯೂ, ಮುನಿಜನರಿಗೆ ಸೇವಕನಂತೆಯೂ, ವೈರಿಗಳಿಗೆ ಯಮನಂತೆಯೂ, ಯೋಗಿ

ಗಳಿಗೆ ಯೋಗೇಶನಂತೆಯೂ ಇರುವ ಈ ಪುರುಷನು ಯಾರು? ಈ ಸುಕುಮಾರನಾದ ಬಾಲಕನು ಜನಗಳ ಕಣ್ಣಿನಗಳಿಗೆ ಉತ್ಸವವನ್ನುಂಟು ಮಾಡುತ್ತಿರುವನು. ಇವನ ಕೋಮಲ ಪಾದಪಲ್ಲವಗಳು ಭೂಸ್ಪರ್ಶ ಮಾಡುವುದನ್ನು ನಾನು ಸಹಿಸಲಾರೆ. ಇವನೊಡನಿರುವ ಇನ್ನೊಬ್ಬನಾರು; ಇವನ ಪ್ರತಿಬಿಂಬ ಸದೃಶನಾಗಿದ್ದಾನೆ. ಬಿಂಬಾಧರನಾಗಿದ್ದಾನೆ." ಶುದ್ಧ ಹೃದಯನಾದ ರಾಜನ ಈ ನುಡಿಗಳನ್ನು ಕೇಳಿ ಗಾಧಿಪುತ್ರನು ಮಂದ ಸ್ಮಿತನಾಗಿ "ಹೇ ರಾಜಾ ಇವನು ದಶರಥಪುತ್ರನು; ಸುರಕಾರ್ಯಕ್ಕಾಗಿ ಅವತರಿಸಿದ ಶ್ರೀಹರಿಯು. ಮನೋರಮನಾದ ಈ ಪುರುಷೋತ್ತಮನು ರಾಮನೆಂದು ಪ್ರಸಿದ್ಧನು. ಇವನ ಪಕ್ಕದಲ್ಲಿರುವವನೇ ಇವನ ತಮ್ಮನು. ಶುಭಲಕ್ಷಣಸಂಪನ್ನನಾದ ಶ್ರೇಷ್ಠ ಲಕ್ಷ್ಮಣನು. ನಾನು ಇವರಿಬ್ಬರನ್ನೂ ಅಯೋಧ್ಯೆಯಿಂದ ಕರೆತಂದೆನು. ಸಿದ್ಧಾಶ್ರಮದಲ್ಲಿ ಅನಾಯಾಸವಾಗಿ ರಾಕ್ಷಸರನ್ನು ಸಂಹರಿಸಿ ನನ್ನ ಯಜ್ಞ ಸಂರಕ್ಷಣೆ ಮಾಡಿದರು. ಶ್ರೀರಾಮನ ಕಟಾಕ್ಷದಿಂದಲೇ ಕಲ್ಲಾಗಿದ್ದ ಮುನಿಪತ್ನಿ ಅಹಲ್ಯೆಯು ಶಾಪದಿಂದ ವಿಮುಕ್ತಳಾದಳು. ಧನ್ವಿಗಳಲ್ಲಿ ಶ್ರೇಷ್ಠನಾದ ಇವನು ನಿನ್ನ ಧನುಸ್ಸನ್ನು ನೋಡಲಿಚ್ಛಿಸುತ್ತಾನೆ. ಧನುರ್ಧಾರಿಗಳೆಂಬ ಸುವರ್ಣಕ್ಕೆ ಈತನು ಒರಗಲ್ಲಿನಂತಿರುವನು. ಹೇ ವೀರ, ಹಿಂದೆ ಸಮುದ್ರರಾಜನು ಅಜಿತ ನಾಮಕ ಪರಮಾತ್ಮನನ್ನು ಅಳಿಯನನ್ನಾಗಿ ಮಾಡಿಕೊಂಡಂತೆ, ನೀನಾದರೂ ಇವನನ್ನು ನಿನ್ನ ಅಳಿಯನನ್ನಾಗಿ ಆರಿಸು" ಎಂದು ನುಡಿದನು. ಗಾಧಿಪುತ್ರನ ಈ ಮಾತುಗಳನ್ನು ಕೇಳಿ ಗೌತಮಪುತ್ರನಾದ ಶತಾನಂದನು ಹರ್ಷಿತನಾಗಿ ಹೀಗೆಂದನು.

**ವಿಶಾಮಿತ್ರನ ಕಥೆ**

"ಹೇ ಜಗನ್ನಾಥ, ಸೋದರಸಹಿತನಾದ ದೇವ, ನಿನಗೆ ಸುಸ್ವಾಗತವು. ನಿನ್ನ ಕರುಣೆಯಿಂದ ನನ್ನ ತಾಯಿಯು ಪಾವನೆಯಾದಳು. ಶಿಷ್ಯನಂತೆ ನಿನ್ನಿಂದ ಹಿಂಬಾಲಿತನಾದ ಈ ವಿಶ್ವಾಮಿತ್ರನು ಧನ್ಯ! ಧನ್ಯ! ಇವನೇನು ಸಾಮಾನ್ಯನಲ್ಲ. ಹೇ ರಾಮ, ಈ ಗಾಧಿಪುತ್ರನು ಪೂರ್ವದಲ್ಲಿ ಮಹಾಬಲಶಾಲಿಯಾದ ರಾಜನು. ಒಮ್ಮೆ ಈತನು ವಸಿಷ್ಠನ ಸರ್ವಾರ್ಥಪ್ರದವಾದ

ಕಾಮಧೇನುವನ್ನು ಸೆಳೆದನು ಅದರ ರಕ್ಷಣೆಗಾಗಿ ಅದರ ಅಂಗಗಳಲ್ಲಿ ತತ್ಕಾಲದಲ್ಲಿ ಉದ್ಭವಿಸಿದ ಶಕ, ಮ್ಲೇಂಛ, ಯವನ, ಪಲ್ಲವರೇ ಮೊದಲಾದವರುಗಳಿಂದ ಈತನ ಬಲವು ನಾಶವಾಯಿತು. ಈ ರಾಜನು ಮಹಾದೇವನನ್ನು ತಪಸ್ಸಿನಿಂದ ತುಷ್ಟಿಗೊಳಿಸಿ ಅನೇಕ ಅಸ್ತ್ರಗಳನ್ನು ಪಡೆದನು. ತನ್ನ ವಶವಿದ್ದ ಸಲಕ ಮಂತ್ರಾಸ್ತ್ರಗಳಿಂದ ವಸಿಷ್ಠನೊಂದಿಗೆ ಯುದ್ಧ ಮಾಡಿದನು ಬ್ರಹ್ಮಾಸ್ತ್ರವನ್ನೂ ಉಪಯೋಗಿಸಿದನು. ಆದರೂ ವಸಿಷ್ಠನನ್ನು ಜಯಿಸಲಾಗಲಿಲ್ಲ. ಬ್ರಹ್ಮಪುತ್ರನಾದ ವಸಿಷ್ಠನು ಅವುಗಳನ್ನೆಲ್ಲಾ ಕೇವಲ ತನ್ನ ಬ್ರಹ್ಮದಂಡದಿಂದ ಎದುರಿಸಿದನು. ಹೀಗೆ ಪರಾಜಿತನಾದ ವಿಶ್ವಾಮಿತ್ರನು ದೀರ್ಘ ತಪಸ್ಸನ್ನಾಚರಿಸಿ ವಸಿಷ್ಠಪುತ್ರನಿಂದ ಚಂಡಾಲತ್ವವನ್ನು ಪಡೆದು ತ್ರಿಶಂಕುವನ್ನು, ಪ್ರತಿಸ್ವರ್ಗವನ್ನೇ ನಿರ್ಮಿಸಿ ಅದರಲ್ಲಿ ಸ್ಥಾಪಿಸಿದನು ಅಂಬರೀಷನ ಯಜ್ಞದಲ್ಲಿ ಪಶುವಾಗಿ ನಿಯಮಿತನಾದ ಶುನಶ್ಶೇಪನನ್ನು ಈ ವಿಶ್ವಾಮಿತ್ರನು ರಕ್ಷಿಸಿದನು. ಪುನಃ ವಾಸುದೇವನನ್ನು ಕುರಿತು ಘೋರ ತಪಸ್ಸನ್ನಾಚರಿಸಿದನು. ದೈವಮಾಯೆಯಿಂದ ಕಾಮಪರವಶನಾಗಿ ಮೇನಕೆಯೊಡನೆ ಹನ್ನೆರಡು ವರ್ಷ ಸಂಸಾರ ಮಾಡಿದನು. ರಂಭೆಯಲ್ಲಿ ಕ್ರುದ್ಧನಾಗಿ ತನ್ನ ತಪಸ್ಸನ್ನು ವ್ಯರ್ಥಗೊಳಿಸಿಕೊಂಡು ಪುನಃ ಚಕ್ರಿಯನ್ನು ಕುರಿತು ನಿರಾಹಾರನಾಗಿ ಶ್ವಾಸಬಂಧ ಮಾಡಿ ನಿಶ್ಚಲನಾಗಿ ದೋಷರಹಿತನಾಗಿ ಹತ್ತು ಸಹಸ್ರ ವರ್ಷಗಳ ಕಾಲ ಉತ್ತಮ ತಪವನ್ನಾಚರಿಸಿದನು. ಬ್ರಹ್ಮಾದಿದೇವತೆಗಳಿಂದಲೂ ಸನ್ಮಾನಿತನಾಗಿ ಕ್ರಮವಾಗಿ ರಾಜರ್ಷಿ, ಋಷಿ, ಮಹರ್ಷಿ, ಬ್ರಹ್ಮರ್ಷಿ ಎಂಬ ಉನ್ನತ ಪದವಿಗಳನ್ನು ಪಡೆದನು ಹೀಗ ವಾಸುದೇವಪ್ರಿಯನಾದ ಇವನಲ್ಲಿ ಬ್ರಹ್ಮಣ್ಯವತ್ಸಲನಾದ ನೀನು ಶಿಷ್ಯತ್ವವನ್ನು ವಹಿಸಿರುವುದೇನಾಶ್ಚರ್ಯವು!" ಶತಾನಂದನಿಂದ ಈ ವೃತ್ತಾಂತವನ್ನು ಕೇಳಿದ ಶ್ರೀರಾಮನು ಮಂದಹಾಸದಿಂದ ವಿಶ್ವಾಮಿತ್ರನ ಮುಖವನ್ನು ನೋಡಿದನು. ಸರ್ವಜ್ಞನಾದ ಈತನಿಗೆ ಕಥೆಯನ್ನು ಕೇಳುವುದು ಲೋಕವಿಡಂಬನೆಯು. ಜ್ಞಾನಸ್ವರೂಪನೂ ಜಗದೇಕಪ್ರಕಾಶನೂ ಆದ ಶ್ರೀರಾಮನಲ್ಲಿ ಅಜ್ಞಾನ ಲೇಶವೂ ಇಲ್ಲ; ಪ್ರಕಾಶಸ್ವರೂಪನಾದ ಸೂರ್ಯನಲ್ಲಿ ಅಂಧಕಾರಲವವೂ ಎಂದೂ ಇರಲಾರದಷ್ಟೆ!

## ಪ್ರಕರಣ ೭

### ಶರ್ವಧನುರ್ಭಂಗ

**ಶೈವಕಾರ್ಮುಕ**

ಮಾರನೆಯ ದಿನ ರಾಘವ ಸಹಿತನಾದ ಕೌಶಿಕನನ್ನು ತನ್ನರಮನೆಗೆ ಕರೆದೊಯ್ದು ಅತಿ ಸಂತೋಷದಿಂದ ನಮಸ್ಕರಿಸಿ ನಮ್ರನಾಗಿ ಇಂತೆಂದನು. "ಹೇ ಗಾಧಿಪುತ್ರ, ಯಜ್ಞಕ್ಕಾಗಿ ಭೂಮಿಯನ್ನು ಉಳಿಸುತ್ತಲಿದ್ದ ನನಗೆ ಭುವನ ಮನೋಹರೆಯಾದ ಕನ್ಯೆಯೊಬ್ಬಳು ದೊರೆತಳು. ಸೀರಾಗ್ರದಲ್ಲಿ ಸಿಕ್ಕಿದುದರಿಂದ ಇವಳನ್ನು "ಸೀತಾ"ಎನ್ನುವರು. ಇವಳ ಲಾಭದಿಂದ ಹುಟ್ಟು ದರಿದ್ರನಿಗೆ ಮಹಾಸಿಧಿ ಸಿಕ್ಕಂತಾಯಿತೆನಗೆ ಪೂರ್ಣಚಂದ್ರನಂತೆ ಅಭಿವೃದ್ಧಳಾದ ಈ ಬಾಲೆಯನ್ನು ನೋಡಿ ಇವಳಿಗನುರೂಪನಾದ ವರನು ಹೇಗೆ ದೊರೆತಾನೆಂದು ಚಿಂತೆಗೊಳಗಾದೆನು. ಅಯೋಗ್ಯನಿಗೆ ಇವಳನ್ನು ಹೇಗೆ ಕೊಡಲೆಂದು ಯೋಚಿಸಿದೆನು. ಶಂಭುವನ್ನು ಕುರಿತು ತಪಸ್ಸನ್ನಾಚರಿಸಿದೆನು. ಪ್ರಸನ್ನನಾದ ಹರನು ಒಂದು ಚಾಪವನ್ನಿತ್ತಿದ್ದಾನೆ. ಆದಿವರಾಹನಲ್ಲದೇ ಭೂಮಿಯನ್ನೆತ್ತಲು ಅನ್ಯರಿಗೆ ಸಾಧ್ಯವಿಲ್ಲದಂತೆ ಈ ಧನಸ್ಸನ್ನು ಎತ್ತಿ ಪೂರ್ಣಗೊಳಿಸಲು ಸಾಮಾನ್ಯರಿಗೆ ಸಾಧ್ಯವಿಲ್ಲ. ಪೂರ್ವದಲ್ಲಿ ಹರನಿಗೆ ದಕ್ಷಯಜ್ಞದಲ್ಲಿ ಹವಿರ್ಭಾಗವನ್ನು ಸಲ್ಲಿಸದಿರಲು ಆತನು ಈ ಬಿಲ್ಲಿನಿಂದಲೇ ದೇವತೆಗಳನ್ನು ತುಂಡರಿಸಿದನು. ಆದರೆ ಶೀಘ್ರವಾಗಿ ಪ್ರಸನ್ನನಾದ ಶಂಕರನು ಮತ್ತೊಮ್ಮೆ ಆ ದೇವತೆಗಳ ಅವಯವಗಳನ್ನು ಜೋಡಿಸಿಕೊಟ್ಟು ಉಜ್ಜೀವಿಸಿದನು. ಈ ಚಾಪವನ್ನು ಪೂರ್ಣಗೊಳಿಸಿದವನಿಗೆ ನನ್ನ ಮಗಳನ್ನು ಕೊಡುತ್ತೇನೆಂದು ಪ್ರತಿಜ್ಞೆ ಮಾಡಿರುವೆನು. ಇದನ್ನು ದೇಶದಲ್ಲೆಲ್ಲಾ ಪ್ರಸಿದ್ಧಗೊಳಿಸಿರುವೆನು. ಇದನ್ನು ತಿಳಿದ ಅನೇಕ ಯಕ್ಷ, ರಾಕ್ಷಸ, ದಾನವ, ದೈತ್ಯ ವೀರರಾಜಪುತ್ರರು ಈ ಸ್ವಯಂವರ ಮಂಟಪಕ್ಕೆ ರಾಜಹಂಸಗಳು ಪದ್ಮಾಕರಕ್ಕೆ ಬರುವಂತೆ ಬಂದರು. ಅವರಲ್ಲಿ ಕೆಲವರು ಧನುಸ್ಸನ್ನು ನೋಡಿಯೇ ಹೆದರಿದರು. ಕೆಲವರು ಧನುಸ್ಸಿನ ಸಮೀಪಕ್ಕೆ ಬಂದು ಹಿಮ್ಮೆಟ್ಟಿದರು.

ಕೆಲವರು ಅದನ್ನು ಮುಟ್ಟಿನೋಡಿದರು. ಮತ್ತೆ ಕೆಲವರು ಅದನ್ನು ಚಲಿಸಲು ಯತ್ನಿಸಿ ವಿಫಲರಾದರು. ಇನ್ನು ಕೆಲವರು ಹೀಗೆ ಪರಾಜಿತರಾದವರನ್ನು ನೋಡಿಯೇ ಭೀತಿಗೊಂಡರು. ದಶಕಂಠನೇ ಮೊದಲಾದ ವೀರರೂ ದರ್ಪದಿಂದ ಈ ಕಾರ್ಮುಕೋದ್ಧಾರಕ್ಕಾಗಿ ಪ್ರಯತ್ನಿಸಿ ನ್ಯೊಬೆವರಿ, ಮೂರ್ಛಿತರಾಗಿ ಭೂಮಿಯಲ್ಲಿ ಬಿದ್ದರು. ಮೂರ್ಛೆ ತಿಳಿದೆದ್ದು ತಮ್ಮ ತಮ್ಮ ನಗರಾಭಿಮುಖರಾದರು. ಇಂತಹ ವೀರರ ಸ್ಥಿತಿಯೇ ಹೀಗಾದ ಮೇಲೆ ಉಳಿದವರ ಪಾಡೇನು ? ಹೀಗೆ ವಿಫಲರಾದವರು ನನ್ನ ಗೂಢಶತ್ರುಗಳಾಗಿ ಬಲಾತ್ಕಾರದಿಂದ ಕನ್ಯೆಯನ್ನು ಕದ್ದೊಯ್ಯಲು ಪ್ರಯತ್ನಿಸಿದರು. ಉನ್ಮತ್ತರಾದ ಈ ಬಲಿಷ್ಠರಿಗೆ ಇದು ಸಾಧಿಸಲಿಲ್ಲ. ಒಂದು ವರ್ಷಕಾಲ ನನ್ನನ್ನು ಯುದ್ಧದಲ್ಲಿ ಎದುರಿಸಿದರು. ಬ್ರಹ್ಮವರಬಲದಿಂದ ನಾನು ಅವರನ್ನು ಪರಾಜಯಗೊಳಿಸಿದೆನು. ಶ್ರೀರಾಮನು ಈ ಬಿಲ್ಲನ್ನು ಪೂರ್ಣಗೊಳಿಸಲಿ. ಸೀತೆಯು ಇವನನ್ನು ಪತಿಯಾಗಿ ವರಿಸಲಿ. ಚಂದ್ರಿಕೆಯು ಚಂದ್ರಮನನ್ನೂ, ಪ್ರಭೆಯು ಪ್ರಭಾನಾಥನನ್ನೂ ಹಿಂಬಾಲಿಸುವಂತೆ ಜಾನಕಿಯು ಈ ರಾಜಕುಮಾರನನ್ನು ಅನುಸರಿಸಲಿ." ಆಗ ವಿಶ್ವಾಮಿತ್ರನು ರಿಪುಭಯಂಕರವಾದ ಆ ಕಾರ್ಮುಕವನ್ನು ತರಿಸಲು ರಾಜನಿಗೆ ತಿಳಿಸಿದನು. ರಾಜಾಜ್ಞೆಯಾಯಿತು ಶಿವವರದಿಂದ ಬಲಿಷ್ಠರಾದ ಐದುಸಹಸ್ರ ವೀರೋತ್ತಮರು ಆ ಧನುಸ್ಸನ್ನಿಟ್ಟಿದ್ದ ಎಂಟುಚಕ್ರಗಳುಳ್ಳ ಉಕ್ಕಿನ ಪೆಟ್ಟಿಗೆಯ ಗಾಡಿಯನ್ನು ಎಳೆತಂದರು.

**ಕಾರ್ಮುಕಭಂಗ**

ಆಗಲಾ ಮುನಿಯು "ಹೇ ವತ್ಸ, ರಾಮ, ಈ ಶ್ರೇಷ್ಠಧನುಸ್ಸನ್ನು ಪೂರ್ಣಗೊಳಿಸು'' ಎಂದು ನುಡಿದನು. ಸಮರ್ಥನಾದ ರಾಜಕುಮಾರನು ಆಗಲೆಂದು ಎದ್ದು ಧನುಸ್ಸಿನ ಸಮೀಪಕ್ಕೆ ಬಂದನು. ಕುಂಡಲಗಳ ಕಾಂತಿಯಿಂದ ಮನೋಹರವಾದ ಕಪೋಲಗಳುಳ್ಳ ಈ ಶ್ಯಾಮಸುಂದರ ಲೋಕೈಕನಾಥನನ್ನು ನೋಡಿ ಸ್ತ್ರೀಯರು ಅಚ್ಚರಿಗೊಂಡರು. ಆ ಹೆಂಗೆಳೆಯರು ಪರಸ್ಪರ ಸಲ್ಲಾಪಗಳಿಂದ ಮೋದಗೊಂಡರು. "ಈ ಸುಂದರನನ್ನು

ಹೆತ್ತ ಕೌಸಲ್ಯೆಯು ಧನ್ಯಳು. ಈ ತಾಪಹರನ ತಂದೆ ದಶರಥನೂ ಧನ್ಯ. ವಿಧಾತನು ಸೌಂದರ್ಯಸಾರವಸ್ತುಗಳನ್ನೆಲ್ಲಾ ಒಟ್ಟುಗೂಡಿಸಿ ಈ ರೂಪವನ್ನು ಸೃಷ್ಟಿಸಿದನೆಂದು ಹೇಳುವಂತಿಲ್ಲ. ಏಕೆಂದರೆ ಈ ಅಪ್ರಾಕೃತ ಆಶ್ಚರ್ಯರತ್ನವು ಸಜ್ಜನರ ಹರ್ಷಕ್ಕಾಗಿ ತಾನೇ ಭೂಮಿಯಲ್ಲಿ ಪ್ರಾದುರ್ಭವಿಸಿದೆ. ಲೋಕಮಾನ್ಯಳಾದ ಜನಕಪುತ್ರಿ ಜಾನಕಿಯು ಸಾಮಾನ್ಯಕನ್ಯೆಯಲ್ಲ. ಇವಳೂ ಸಾಕ್ಷಾಲ್ಲಕ್ಷ್ಮಿಯೇ. ಸಮುದ್ರದಿಂದ ಲಕ್ಷ್ಮಿಯು ಉದಯಿಸಿದಂತೆ ಇವಳೂ ಯಾಗಭೂಮಿಯಿಂದ ಅಭಿವ್ಯಕ್ತಳಾಗಿದ್ದಾಳೆ. ಸೀತೆಯು ರಾಮನ ಭಾರ್ಯೆಯಾಗಲಿ. ರಾಮನೇ ಅವಳಿಗೆ ಅನುರೂಪನಾದ ವರನು. ಇಂದಿರೆಯು ಮುಕುಂದನಿಗೆ ಸರಿಯಾದ ಕನ್ಯೆ ಮುಕುಂದನೇ ಇಂದಿರೆಗೆ ಅನುರೂಪನಾದ ವರನಷ್ಟೆ. ಧನುರ್ಭಂಗವನ್ನು ಶ್ರೀರಾಮನ ಪರೀಕ್ಷೆಯೆಂದು ಜನಕರಾಜನು ತಿಳಿಯಲಾಗದು ಪ್ರಭಾಕರನ ಪ್ರಕಾಶವನ್ನು ಹಣತೆಯ ದೀಪದಿಂದ ಪರೀಕ್ಷಿಸುವರೇ? ಸಖಿಯರೇ ಈ ರಮಣೀಯನು ಜನಕಾತ್ಮಜೆಯ ಪಾಣಿಗ್ರಹಣ ಮಾಡಿ ಅವಳ ರಮಣನಾಗಲಿ. ನಮ್ಮ ಸರ್ವಪುಣ್ಯಬಲದಿಂದ ಲಕ್ಷ್ಮೀಪತಿಯು ಇದನ್ನು ನಡೆಸಿಕೊಡಲಿ'' ಎಂದರು. ಕಿವಿಗಳಿಗೆ ಅಮೃತವೆನಿಸುವ ಈ ಲಲನೆಯರ ಆಲಾಪಗಳಿಂದ ವಿಸ್ಮಯಗೊಳ್ಳದ ಶ್ರೀರಾಮನು ಮಂದಸ್ಮಿತನಾಗಿ ಎಡಗೈಯಿಂದ ಧನುಸ್ಸನ್ನು ಮೇಲಕ್ಕೆತ್ತಿದನು. ಮುನಿಜನರು ಸ್ವಸ್ತಿವಾಚನ ನುಡಿದರು ಜನಸಮೂಹದಿಂದ ಸಹಿತರಾದ ಜನಕರಾಜನೂ, ವಿಶ್ವಾಮಿತ್ರನೂ ರಾಜೀವಲೋಚನನಾದ ಶ್ರೀರಾಮನನ್ನು ವಿಸ್ಮಯದಿಂದ ನೋಡುತ್ತಲಿದ್ದರು. ಮುಗುಳನಗೆಯನ್ನು ಬೀರುತ್ತಾ ಲಕ್ಷ್ಮಣನನ್ನು ನೋಡಿ ಶ್ರೀರಾಮನು ಕ್ಷಣಮಾತ್ರದಲ್ಲಿ ಶಿವಕಾರ್ಮುಕವನ್ನು ಬಗ್ಗಿಸಿ ಹಗ್ಗವನ್ನು ಬಿಗಿದನು. ಐರಾವತದ ಕೈಗೆ ಸಿಕ್ಕ ಕಬ್ಬಿನ ಜಲ್ಲೆಯಂತೆ ಜಗದೊಡೆಯನಾದ ರಾಘವನಿಂದ ಎಳೆಯಲ್ಪಟ್ಟ ಚಾಪವು ಮಧ್ಯದಲ್ಲಿ ಮುರಿಯಿತು. ಧನುರ್ಭಂಗದಿಂದುಂಟಾದ ಆ ಧ್ವನಿಯು ಜಗತ್ತ್ರಯದಲ್ಲಿ ಪ್ರಸರಿಸಿ ರಾಮನು ಜಾನಕಿಯನ್ನು ಕರೆದೊಯ್ಯುವನೆಂಬ ರಮಣೀಯ ವಾರ್ತೆಯನ್ನು ಘೋಷಿಸಿತು. ಅನ್ಯರಿಂದ ಅಸಾಧ್ಯವಾದ ಆ ಶ್ರೇಷ್ಠ

ಕಾವರ್ುಕವನ್ನು ಕ್ಷಣಮಾತ್ರದಲ್ಲಿ ಮುರಿದ. ಆ ರಘುವೀರನು ವಿಶ್ವಾಮಿತ್ರನ ಹರ್ಷಪೂರ್ಣವಾದ ಮುಖವನ್ನು ನೋಡುತ್ತಾ ನಿಂತನು.

**ಜಾನಕಿಯ ಮಾಲಾರ್ಪಣ**

ಧನುರ್ಭಂಗದಿಂದ ಸಂತಸಗೊಂಡ ರಾಜನು ವೈದೇಹಿಯನ್ನು ಕರೆತರಲು ಅಂತಃಪುರಕ್ಕೆ ಹೇಳಿಕಳುಹಿಸಿದನು. ಕರೆ ಬಂದೊಡನೆಯೇ ರಾಜಪುತ್ರಿಯು ವೈಭವಯುಕ್ತವಾದ ತನ್ನ ಅಂತಃಪುರದಿಂದ ಇಂದೀವರದಳನಯನೆಯಾದ ಇಂದಿರೆಯಂತೆ, ವೇದಗರ್ಭನಿಂದ ಹೊರಟ ವೇದವಾಣಿಯಂತೆ ಹೊರಬಂದಳು. ಅವಳ ನೂಪುರದ ಮಂಜುಳರವವು ಸುತ್ತಲೂ ಆವರಿಸಿತು. ಅವಳ ಗಮನಸಂಪತ್ತು ರಾಜಹಂಸಿಯನ್ನು ನಾಚಿಸಿತು. ಹೆಜ್ಜೆಹೆಜ್ಜೆಗೂ ರಮ್ಯತರಳಾಗಿ ಶೋಭಿಸಿದಳು ನೋಡಿನೋಡಿದಂತೆ ಅವಳ ರೂಪದಲ್ಲಿ ನಾವೀನ್ಯತೆಯು ಹೊರಸೂಸಿತು. ಅವಳ ಮುಖವು ಸ್ವಾಭಾವಿಕ ಹಾಸಶೋಭೆಯಿಂದ ಬೆಳಗಿತು. ಅಲಪಿಸದಿದ್ದರೂ ಅಭಿಲಾಪ ಮಾಡುವವಳಂತೆ ಕಂಗೊಳಿಸಿದಳು. ನೆರೆದ ಜನರ ಕಂಗಳಿಗೆ ಉತ್ಸವವಾಯಿತು. ಈ ದೇವಿಯ ಔದಾರ್ಯ, ಸೌಂದರ್ಯ, ವಿಲಾಸಾದಿಗಳು ವರ್ಣಿಸಲಳವಲ್ಲ. ಉತ್ಸುಕತೆಯಿಂದ ಇವುಗಳನ್ನು ಹೇಳಹೊರಟ ಆದಿಕವಿ ಚತುರ್ಮುಖನು ಅಚತುರನೆನಿಸಲು ನರಕವಿಗಳ ಪಾಡೇನು? ಆ ಜಾನಕಿಯು ವೇಗದಿಂದ ಹರಿದುಬರುತ್ತಲಿದ್ದ ಲಜ್ಜಾನದಿಯನ್ನು ಭಕ್ತಿಮಹಾರ್ಣವದ ಮಹಾಪ್ರವಾಹದಿಂದ ತಿರಸ್ಕರಿಸಿ ಮಂಗಳಾಂಗನಾದ ಜಗದೇಕನಾಥನನ್ನು ಕುಡಿನೋಟದಿಂದ ನೋಡಿದಳು. ಪ್ರಸನ್ನವದನ; ಸರಸೀರುಹೇಕ್ಷಣ; ಶ್ಯಾಮಸುಂದರ; ಸುಗಂಧಾರುಣಚಂದನಲಿಪ್ತಾಂಗ; ಶೂರಕಿಶೋರ; ಸಜ್ಜನಶರಣ್ಯನಾದ ಈ ತನ್ನ ಕಾಂತನನ್ನು ನೋಡಿ ಜಾನಕಿಯು ಪುಲಕಿತಳಾದಳು. ನವಸುಗಂಧದಲ್ಲದ್ದಿದ ಸ್ವರ್ಣಮಯ ನೀರಜಹಾರವನ್ನು ಆ ನೀರಜಲೋಚನೆಯು ನೀರದಶ್ಯಾಮನ ಕಂಬುಕಂಠದಲ್ಲಿ ಸಮರ್ಪಿಸಿದಳು. ಶ್ರೀರಾಮನೂ ಪ್ರಣಯಾಮೃತಪೂರ್ಣಮನೋಜ್ಞದೃಷ್ಟಿಯನ್ನು ಜಾನಕಿಯೆಡೆಗೆ ಬೀರಿದನು. ಶಂಭು, ಶಂಕರ,

ಪುರಂದರಾದಿ ದೇವತೆಗಳು ಲಲನಾಸಹಿತನಾದ ಈ ಸುಂದರೀರಮಣನನ್ನು ನೋಡಿ ಹರ್ಷಗೊಂಡರು. ಗಂಧರ್ವರ ಗಾನ, ಅಪ್ಸರೆಯರ ನೃತ್ಯ, ದಿವ್ಯಮಂಗಳವಾದ್ಯಗಳ ಮಂಜುಳರವ ಮತ್ತು ಸುರಲಲನೆಯರ ದಿವ್ಯ ಪುಷ್ಪವೃಷ್ಟಿಗಳಿಂದ ಪೂಜಿತರಾದ ಶ್ರೀರಾಮನೂ, ರಾಮರಮಣಿಯೂ ಸಂತೋಷವನ್ನು ವ್ಯಕ್ತಪಡಿಸಿದರು

## ಪ್ರಕರಣ ೮

### ವೈದೇಹೀವಿವಾಹ–ಅಯೋಧ್ಯಾಗಮನ

**ದಶರಥನ ಆಗಮನ**

ಜನಕನು ವಿಶ್ವಾಮಿತ್ರನ ಅನುಮತಿಯನ್ನು ಪಡೆದು ದಶರಥನೆಡೆಗೆ ದೂತರನ್ನು ಕಳುಹಿಸಿದನು. ಮೂರು ದಿನ ಪ್ರಯಾಣ ಮಾಡಿ ಅಯೋಧ್ಯೆಯನ್ನು ಸೇರಿ ಮಾನಸಸರೋವರವನ್ನು ಹೊಂದಿದ ಹಂಸಗಳಂತೆ ಆ ದೂತರು ವಿಶ್ರಮಿಸಿದರು. ಮಂತ್ರಿಮಧ್ಯದಲ್ಲಿದ್ದ ರಾಜನನ್ನು ಕಾಣಿಸಿಕೊಂಡರು. ಕೈಮುಗಿದು ವಿನೀತರಾಗಿ ಜನಕರಾಜನ ಅಭಿಮತವನ್ನು ತಿಳುಹಿದರು. "ಹೇ ರಾಜಾ, ಭೂಮಂಡಲದಲ್ಲಿ ಸಮಸ್ತ ವೀರರೂ ಚಾಪ ಭಂಗಕ್ಕಾಗಿ ಯತ್ನಿಸಿದರು. ಯಾರೂ ಕೃತಕೃತ್ಯರಾಗಲಿಲ್ಲ. ಆದರೆ ಕಮಲನಯನನಾದ ಶ್ರೀರಾಮನು ಈ ಕೋದಂಡವನ್ನು ಮುರಿದನು. ಜಾನಕಿಯೂ ಅವನಲ್ಲಿ ಅನುರಕ್ತಳಾಗಿದ್ದಾಳೆ. ವಿಶ್ವಾಮಿತ್ರನು ನಿನ್ನನ್ನು ನಿರೀಕ್ಷಿಸುತ್ತಲಿರುವನು. ಮಗನ ಮದುವೆಗಾಗಿ ಬಾಂಧವರಿಂದ ಕೂಡಿ ದಯಮಾಡಬೇಕು" ಎಂದರು. ಸಂತುಷ್ಟನಾದ ದಶರಥನು ಮಂತ್ರಿಗಳೊಡನೆ ಯೋಚಿಸಿ ಪ್ರಾತಃಕಾಲದಲ್ಲಿ ಹೊರಡಲು ತೀರ್ಮಾನಿಸಿದನು. ರತ್ನಾಭರಣಗಳೊಡನೆ ದೂತರನ್ನು ಮುಂಗಡವಾಗಿಯೇ ಕಳುಹಿಸಿದನು. ರಾಜಾಜ್ಞೆಯಂತೆ ಸುಮಂತ್ರನು ಬಹುವೇಗವಾದ ಯಾನವನ್ನು ಸಿದ್ಧಗೊಳಿಸಿದನು. ಚತುರಂಗಬಲವು ಅಯೋಧ್ಯೆಯಿಂದ ಹೊರಟಿತು. ವಿಪ್ರ

ರಿಂದಲೂ, ವಸಿಷ್ಠನಿಂದಲೂ, ಮಂತ್ರಿಗಳಿಂದಲೂ, ಪತ್ನಿಯರಿಂದ
ಕೂಡಿ ದಶರಥನು ಜನಕಾಲಯವನ್ನು ಕುರಿತು ತೆರಳಿದನು.

**ಕನ್ಯಾ ವಾಗ್ದಾನ**

ಬರುತ್ತಲಿದ್ದ ರಾಜನನ್ನು ದೂರದಿಂದಲೇ ನೋ
ಮಿಥಿಲಾಧಿಪನು ಶತಾನಂದರೊಡಗೂಡಿ ವೈ
ದಿಂದ ಎದರುಗೊಂಡನು. ಪುರಪ್ರವೇಶಗೊ
ಜನಕನು ಯಥಾವಿಧಿ ದಶರಥನನ್ನು ಪೂಜಿಸಿ ಮ
ಜನ ಮಧ್ಯದಲ್ಲಿ ಹೀಗೆ ನುಡಿದನು. "ಹೇ ರಾಜೇಂದ್ರ ಅದೃಷ್ಟವಶದಿ
ನನಗೆ ಹರಿಭಕ್ತರ ದರ್ಶನವಾಯಿತು. ಅದೃಷ್ಟದಿಂದಲೇ ರಘುಕ
ಶ್ರೇಷ್ಠರೊಡನೆ ಬಂಧುತ್ವ ಬೆಳೆಯಿತು. ನನ್ನ ಪುತ್ರಿಯರಾದ ಸಿ
ಮತ್ತು ಊರ್ಮಿಳೆಯರನ್ನು ರಾಮಲಕ್ಷ್ಮಣರಿಗೆ ವಿವಾಹ ಮಾಡಿಕೊ
ಲಿಚ್ಛಿಸುತ್ತೇನೆ" ದಶರಥನು ಸಂತೋಷದಿಂದ ಕನ್ಯಾಸ್ವೀಕಾರವನ್ನೊ
ಮಕ್ಕಳೊಡಗೂಡಿ ಗೃಹಾಂತರಕ್ಕೆ ತೆರಳಿದನು. ಭಗವದ್ಗುಣಗಾನ
ರಾದ ವಿಶ್ವಾಮಿತ್ರಾದಿಗಳೊಡನೆ ಆ ರಾತ್ರಿಯನ್ನು ಕಳೆದನು. ಇ
ಜನಕನು ಇಕ್ಷುಮತೀತೀರದಲ್ಲಿದ್ದ ತನ್ನ ಸೋದರನಾದ ಕುಶಧ್ವಜನನ
ದೂತರಿಂದ ಬರಮಾಡಿಕೊಂಡನು. ಪುರೋಹಿತನಾದ ವಸಿಷ್ಠನು ಕುಲ
ರಾದ ಆ ರಘುವಂಶದರಸರ ಕುಲಾಚಾರಗಳನ್ನು ತಪ್ಪದೇ ನೆರವೇ
ಸಿದನು. ಕನ್ಯಾವಾಗ್ದಾನ ಕಾರ್ಯವು ಏರ್ಪಟ್ಟಿತು. ವಸಿಷ್ಠನು ದಶರಥ
ಶ್ರೇಷ್ಠವಂಶವನ್ನು ವರ್ಣಿಸಿದನು. ಇಕ್ಷ್ವಾಕು, ಮಾಂಧಾತ, ಸಗ
ಅಂಬರೀಷ, ರಘು, ಅಜನೇ ಮೊದಲಾದ ಹರಿಭಕ್ತರು ಬೆಳಗಿದ ಪವಿ
ವಂಶವನ್ನು ವಿಸ್ತರಿಸಿದನು ಮುನಿಗಳಾಜ್ಞೆಯಂತೆ ಜನಕನೂ ಕನ
ವಂಶವನ್ನುಚ್ಚರಿಸಿದನು. ನಿಮಿ, ದೇವರಾತ, ಹ್ರಸ್ವರೋಮ ಮೊದಲಾ
ನೃಪರುದಯಿಸಿದ ಉತ್ತಮ ವಂಶಜನಾದ ಜನಕನು ರಾಮಲಕ್ಷ್ಮಣ
ಗಾಗಿ ತನ್ನ ಕನ್ಯಾರತ್ನಗಳನ್ನು ಕೊಡಲು ವಾಗ್ದಾನ ಮಾಡಿದನು. ವಿಶ
ಮಿತ್ರ ವಸಿಷ್ಠರು, ಕುಶಧ್ವಜನ ಇಬ್ಬರು ಹೆಣ್ಣುಮಕ್ಕಳಾದ ಮಾಲವಿ
ವಿಜಯಕೀರ್ತಿರನ್ನು ಭರತ ಶತ್ರುಘ್ನರಿಗೆ ಕೊಡಲು ಸೂಚಿಸಿದ

ಜನಕನು ಆನಂದದಿಂದ ಒಪ್ಪಿದನು; ಯಥಾವಿಧಿ ವಾಗ್ದಾನವೂ ನೆರವೇರಿತು.

ಮಾರನೇ ದಿನ ದಶರಥನು ನಾಂದೀಪೂಜಾದಿ ವೇದೋಕ್ತ

**ವಿವಾಹ**

ಉತ್ಸವಗಳನ್ನು ಶ್ರೀಹರಿಪ್ರೀತ್ಯರ್ಥವಾಗಿ ಆಚರಿಸಿದನು. ತನ್ನ ಮಕ್ಕಳ ಶ್ರೇಯಸ್ಸಿಗಾಗಿ ಬ್ರಾಹ್ಮಣರನ್ನು ಆಹ್ವಾನಿಸಿ ವಸ್ತ್ರಗಳಿಂದಲೂ ಸುವರ್ಣಾಲಂಕಾರಗಳಿಂದಲೂ ಶೋಭಿತವಾದ ನಾಲ್ಕು ಸಹಸ್ರ ಹಸುಗಳನ್ನು ದಾನಮಾಡಿದನು. ಭೂರಿಭೋಜನ ದಕ್ಷಿಣೆಗಳಿಂದ ಅವರನ್ನು ತುಷ್ಟಿಗೊಳಿಸಿದನು. ಈ ವೇಳೆಗೆ ಭರತನ ಸೋದರಮಾವ ಯುಧಾಜಿತನೂ ಬಂದನು. ಸ್ವಸ್ತಿವಾಚನಾದಿಗಳು ನಡೆಯುತ್ತಿರಲು ಸದ್ಗುಣಭೂಷಿತರಾದ ಈ ನಾಲ್ವರು ಕುಮಾರರೂ ರತ್ನಭೂಷಣಗಳಿಂದಲಂಕೃತರಾದರು. ಇತ್ತ ಜನಕ ಕುಶಧ್ವಜರೂ ಶತಾನಂದರ ಅಪ್ಪಣೆಯಂತೆ ಕನ್ಯೆಯರಿಗಾಗಿ ಸ್ವಸ್ತಿವಾಚನ ನಾಂದೀಸ್ಥಾಪನಾದಿ ಶುಭಕಾರ್ಯಗಳನ್ನು ನೆರವೇರಿಸಿದರು. ನಾಲ್ಕು ವಿವಾಹಗಳೂ ಉತ್ತಮವಾದ ಉತ್ತರಾಫಲ್ಗುನೀ ಶುಭನಕ್ಷತ್ರದಲ್ಲಿಯೇ ನೆರವೇರಿದವು. ವಿವಾಹಾಂಗವಾಗಿ ವಸಿಷ್ಠರು ವಿಶ್ವಾಮಿತ್ರರ ಅನುಮತಿಯಿಂದ ಹೋಮಮಾಡಿದರು. ಶ್ರೀರಾಮನು ಚಕ್ರಾಂಕಿತವಾದ ತನ್ನ ಅರುಣಹಸ್ತದಿಂದ ಸರೋಜಾಂಕಿತವಾದ ಸೀತೆಯ ಪಾಣಿಪಲ್ಲವವನ್ನು ಸ್ವೀಕರಿಸಿದನು ಅಗ್ನಿಯನ್ನು ಮೂರು ಬಾರಿ ಪ್ರದಕ್ಷಿಣೆಮಾಡಿ ಸಪ್ತಪದಿಯನ್ನಾಚರಿಸಿದನು. ವೇದೋಕ್ತಕ್ರಿಯೆಗಳೆಲ್ಲಾ ಪೂರ್ಣವಾಗಿ ಆಚರಿಸಲ್ಪಟ್ಟವು. ಜಗಜ್ಜನಕನಾದ ಶ್ರೀರಾಮನೂ ಜಗನ್ಮಾತೆಯಾದ ಜಾನಕಿಯೂ ವರ-ಕನ್ಯೆಯರಾಗಿ ವಿಹಾರಗೈದುದನ್ನು ಸುರರು ಅಂಬರದಿಂದೀಕ್ಷಿಸಿದರು. ರತ್ನಪ್ರಭೆಯಿಂದ ಶೋಭಿಸುವ ದೇವಗಂಧರ್ವರ ವಿಮಾನಾವಳಿಯು ನಭವನ್ನಲಂಕರಿಸಿತು. ದೇವತೆಗಳ ಮಂಗಳವಾದ್ಯಗಳು ಮೊಳಗಿದವು; ಗಂಧರ್ವರು ಗಾನಮಾಡಿದರು; ಅಪ್ಸರೆಯರು ನರ್ತಿಸಿದರು; ಎಲ್ಲರೂ ಶ್ರೀ ಸೀತಾರಾಮರ ಮೇಲೆ ಪೂಮಳೆಗರೆದರು. ಸುರಾಂಗನೆಯರಂತೆ ಸರ್ವಾಭರಣ ಭೂಷಿತ

ರಾದ ಮಂಗಳಾಂಗಿಯರು ಆ ವಿವಾಹ ಮಂಟಪದಲ್ಲಿ ಅತಿ ಸಂಭ್ರಮದಿಂದ ಸಂಚರಿಸಿದರು. ಊರ್ಮಿಳೆಯು ಲಕ್ಷ್ಮಣನನ್ನೂ ಮಾಲವಿಯು (ಮಾಂಡವಿಯು) ಭರತನನ್ನೂ ಶ್ರುತಕೀರ್ತಿಯು ಶತ್ರುಘ್ನನನ್ನೂ ವರಿಸಿದರು. ಜನಕಮಹೀಪಾಲನು ವಸಿಷ್ಠರೇ ಮೊದಲಾದ ಪುರೋಹಿತರನ್ನೂ ಇತರ ಬ್ರಾಹ್ಮಣಸ್ತೋಮವನ್ನೂ ದಕ್ಷಿಣಾದಿಗಳಿಂದ ವಿಧಿವತ್ತಾಗಿ ಪೂಜಿಸಿ ಸನ್ಮಾನಿಸಿದನು.

ಮಾರನೇ ಪ್ರಾತಃಕಾಲ ಸಂತುಷ್ಟನಾದ ವಿಶ್ವಾಮಿತ್ರನನ್ನು ಆನಂದಾಶ್ರುಗಳನ್ನು ಸುರಿಸುತ್ತಾ, ದಶರಥನು ಬೀಳ್ಕೊಟ್ಟನು. ಆತನು ಹಿಮವತ್ಪರ್ವತದ ತಪ್ಪಲಿಗೆ ತಪಸ್ಸನ್ನಾಚರಿಸಲು ಹೊರಟನು ಜನಕರಾಜನು ದಶರಥ ಪುತ್ರರಿಗೆ ಕನ್ಯಾಬಳುವಳಿಗಳನ್ನೊಪ್ಪಿಸಿಕೊಟ್ಟನು. ದಿವ್ಯದುಕೂಲಗಳನ್ನೂ, ಮಣಿರಾಶಿಗಳನ್ನೂ, ರತ್ನಗಂಬಳಿಗಳನ್ನೂ ಅನೇಕ ಲಕ್ಷ ಗೋವುಗಳನ್ನೂ ಚತುರಂಗ ಸೈನ್ಯವನ್ನೂ, ಇಪ್ಪತ್ತು ಸಹಸ್ರ ದಾಸಿಯರನ್ನೂ, ಅನೇಕ ಕೋಟಿ ಹಿರಣ್ಯವನ್ನು ಅರ್ಪಿಸಿದನು. ದಕ್ಷಿಣಾದೇವಿಯು ಯಜ್ಞನಾಮಕ ಶ್ರೀಹರಿಯನ್ನೂ, ಇಂದಿರೆಯು ದಾಮೋದರನನ್ನೂ, ಜಯಂತಿಯು ಋಷಭನನ್ನೂ, ಹಿಂಬಾಲಿಸಿದಂತೆ ಜಾನಕಿಯು ಶ್ರೀರಾಮನನ್ನು ಅನುಸರಿಸಿದಳು. ಕಾಲನಿಮಿತ್ತಕವಾದ ಮುಪ್ಪು, ನಿದ್ರಾದಿವಿಕಾರಗಳೂ, ಅಜ್ಞಾನಾದಿ ಕಶ್ಮಲಗಳೂ, ಈ ಅಗಣ್ಯಗುಣಪೂರ್ಣರಾಗ ವಿಮಲದಂಪತಿಗಳನ್ನು ಸೋಂಕವು. ಈ ಕಮಲಾಕಮಲೇಕ್ಷಣರು ಜಗತ್ತಿನ ಮಾತಾಪಿತೃಗಳು. ದೇವತೆಗಳ ಪ್ರಾರ್ಥನೆಯಿಂದ ಭೂಮಿಯಲ್ಲಿ ಅವತರಿಸಿದವರು. ಸರ್ವಪಾಪಹರವೂ ಮುಕ್ತಿಸೋಪಾನವೂ ಆದ ಈ ದಂಪತಿಗಳ ವಾರ್ತೆಯು ಪ್ರತಿಮನೆಯಲ್ಲಿಯೂ ಹರಡಿತು.

**ದಶರಥನ ಅಯೋಧ್ಯಾ ಪ್ರಯಾಣ ಮತ್ತು ಭಾರ್ಗವ ದರ್ಶನ**

ಇತ್ತ ಜನಕನಿಂದ ಬೀಳ್ಕೊಂಡು ಬ್ರಾಹ್ಮಣರಿಂದಲೂ ಸೇನೆಯಿಂದಲೂ, ಮಕ್ಕಳಿಂದಲೂ, ಸೊಸೆಯರಿಂದಲೂ, ಹೆಂಡತಿಯರಿಂದಲೂ ಕೂಡಿ ದಶರಥನು ಅಯೋಧ್ಯೆಗೆ ಹೊರಟನು.

ಮಾರ್ಗಮಧ್ಯದಲ್ಲಿ ಪಕ್ಷಿಗಳು ಹೃದಯ ವಿದಾರಕ ಸ್ವರದಿಂದ ಧ್ವನಿಗೈಯುತ್ತಾ ಬಲಗಡೆಯಿಂದ ಸುತ್ತಿದವು. ಮೃಗಗಳು ಬಲಗಡೆ ಹೋದವು. ಹೀಗೆ ಶುಭಾಶುಭ ಮಿಶ್ರ ಶಕುನಗಳನ್ನು ಕಂಡು ನಿಮಿತ್ತ ಜ್ಞನಾದ ದಶರಥನು ವಿಪತ್ತನ್ನು ಶಂಕಿಸಿದನು. ಕುಲಪುರೋಹಿತ ನಾದ ವಸಿಷ್ಠನನ್ನು ಹೇಗೆ ಕಲ್ಯಾಣವಾದೀತೆಂದು ಪ್ರಶ್ನಿಸಿದನು. ಶೀಘ್ರ ದಲ್ಲಿ ಭಯಪ್ರಾಪ್ತಿಯೂ ಅದರ ಶಾಂತಿಯೂ ಆಗುವುದೆಂದು ಜ್ಞಾನಿಯಾದ ವಸಿಷ್ಠನು ನುಡಿದನು. ಅದೇ ಸಮಯಕ್ಕೆ ಪ್ರಳಯಾಗ್ನಿಗೆ ಸದೃಶ ವಾದ ತೇಜಃಪುಂಜರೂಪವೊಂದು ಮಾರ್ಗದಲ್ಲಿ ಕಾಣಿಸಿತು. ದುಷ್ಟ ಕ್ಷತ್ರಿಯ ಕುಲವನ್ನು ಇಪ್ಪತ್ತೊಂದು ಬಾರಿ ನಾಶಮಾಡಿದ ಈ ಭೃಗು ನಂದನನೇಕೆ ಈಗ, ಇಲ್ಲಿ ಹೀಗೆ ಪ್ರಜ್ವಲಿಸುತ್ತಲಿದ್ದಾನೆಂದು ಮಹರ್ಷಿ ಗಳು ಅಚ್ಚರಿಯಿಂದ ಆ ತೇಜೋರಾಶಿಯನ್ನು ವೀಕ್ಷಿಸಿದರು. ಕಠೋರ ವಾದ ಕೊಡಲಿಯನ್ನು ಕಂಠದಲ್ಲಿ ಧರಿಸಿದ್ದಾನೆ. ಪ್ರಜ್ವಲಿಸುವ ಬಾಣ ಗಳನ್ನು ತೊಟ್ಟಿದ್ದಾನೆ. ಇವನೇಕೆ ಹೀಗೆ ಬಂದನೆಂದು ಅವರು ಹೆದರಿ ದರು. "ಕ್ಷತ್ರಿಯ ಕುಲವೆಂಬ ಒಣಹುಲ್ಲನ್ನು ಮತ್ತೊಮ್ಮೆ ದಹಿಸುವುದಿ ಲ್ಲವಷ್ಟೆ? ತ್ರಿಲೋಕಗಳನ್ನು ಸುಡಲುದ್ಯುಕ್ತನಾಗಿಲ್ಲವಷ್ಟೆ? ಹೇ ಪರಶು ರಾಮ! ಪ್ರಸನ್ನನಾಗು," ಎನ್ನುತ್ತಾ ವಸಿಷ್ಠರೇ ಮೊದಲಾದ ದ್ವಿಜರು ಅವನನ್ನು ಪೂಜಿಸಿದರು. ಪರಶುರಾಮನು ಧೀರ ದಶರಥರಾಮನೆಡೆಗೆ ಬಂದು ಹೀಗೆ ಮಾತನಾಡಿದನು. "ಹೇ ರಾಮ, ಪೂರ್ವದಲ್ಲಿ ಹರಿಹರರು ಎರಡು ಜಗತ್ಪ್ರಸಿದ್ಧವಾದ ಚಾಪಗಳಿಂದ ಯುದ್ಧಮಾಡಿ ಸಕಲ ಜಗತ್ತನ್ನೂ ಜಯಿಸಿದರು. ದೇವತೆಗಳಿಗೆ ಹರಿಹರರಲ್ಲಿ ಅಧಿಕ ಬಲವಂತ ರಾರೆಂದು ತಿಳಿಯಲು ಕುತೂಹಲವಾಯಿತು. ದೇವತೆಗಳು ಅವರನ್ನು ತಮ್ಮ ಬಲಪ್ರದರ್ಶನಮಾಡಲು ಪ್ರಾರ್ಥಿಸಿದರು. ಇವರಿಬ್ಬರೂ ಯುದ್ಧ ಮಾಡಲು ಸಿದ್ಧರಾಗಿ ತಮ್ಮ ಬಿಲ್ಲುಗಳನ್ನು ಧರಿಸಿದರು. ಬ್ರಹ್ಮೇಶರೊಡನೆ ಯನಾದ ಶ್ರೀಹರಿಯ ಹುಂಕಾರಮಾತ್ರದಿಂದಲೇ ಅಹಂಕಾರ ತತ್ವಾಭಿ ಮಾನಿಯಾದ ಹರನು ಗರುಡನನ್ನು ಕಂಡ ಸರ್ಪದಂತೆ ಸ್ತಂಭಿತನಾದನು.

